# ಭಾಷಾಂತರ ಕೃತಿಗಳಲ್ಲಿ ವಿಜಯನಗರ : ಒಂದು ಸಾಂಸ್ಕೃತಿಕ ಅಧ್ಯಯನ

(ಕನ್ನಡಿಗರ ಕರ್ಮಕತೆ, ಮರೆತುಹೋದ ಮಹಾಸಾಮ್ರಾಜ್ಯ - ವಿಜಯನಗರ, ಮರೆಯಲಾಗದ ಮಹಾಸಾಮ್ರಾಜ್ಯ ಕೃತಿಗಳನ್ನು ಅನುಲಕ್ಷಿಸಿ)

ಎಂ. ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

**ಸಾವಿತ್ರಿಬಾಯಿ ಪವಾರ**

ಮಾರ್ಗದರ್ಶಕರು

**ಡಾ. ವಿಠಲರಾವ್ ಟಿ. ಗಾಯಕ್ವಾಡ**

ಪ್ರಾಧ್ಯಾಪಕರು



ಭಾಷಾ ನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೭

# ಭಾಷಾಂತರ ಕೃತಿಗಳಲ್ಲಿ ವಿಜಯನಗರ :
# ಒಂದು ಸಾಂಸ್ಕೃತಿಕ ಅಧ್ಯಯನ

(ಕನ್ನಡಿಗರ ಕರ್ಮಕತೆ, ಮರೆತುಹೋದ ಮಹಾಸಾಮ್ರಾಜ್ಯ - ವಿಜಯನಗರ,
ಮರೆಯಲಾಗದ ಮಹಾಸಾಮ್ರಾಜ್ಯ ಕೃತಿಗಳನ್ನು ಅನುಲಕ್ಷಿಸಿ)

ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಪ್ರಬಂಧ




ಸಂಶೋಧಕರು

**ಸಾವಿತ್ರಿಬಾಯಿ ಪವಾರ**

ಮಾರ್ಗದರ್ಶಕರು

**ಡಾ. ವಿಠಲರಾವ್ ಟಿ. ಗಾಯಕ್ವಾಡ್**

ಪ್ರಾಧ್ಯಾಪಕರು







ಭಾಷಾ ನಿಕಾಯ

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೭

# ದೃಢೀಕರಣ ಪತ್ರ

ಕುಮಾರಿ ಸಾವಿತ್ರಿಬಾಯಿ ಪವಾರ ಇವರು **ಭಾಷಾಂತರ ಕೃತಿಗಳಲ್ಲಿ ವಿಜಯನಗರ : ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ವಿಷಯ ಕುರಿತ ಸಂಪ್ರಬಂಧವನ್ನು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಾದರಪಡಿಸುತ್ತಿರುವ ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

**ಸ್ಥಳ** : ವಿದ್ಯಾರಣ್ಯ

**ದಿನಾಂಕ** : 30-07-07

Vittalrao

**ಡಾ. ವಿಠಲರಾವ್ ಟಿ. ಗಾಯಕ್ವಾಡ್**
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

ಭಾಷಾಂತರ ಕೃತಿಗಳಲ್ಲಿ ವಿಜಯನಗರ : ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ವಿಷಯ ಕುರಿತ ಸಂಪ್ರಬಂಧವನ್ನು ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೬-೦೭ನೇ ಶೈಕ್ಷಣಿಕ ಸಾಲಿನಲ್ಲಿ ಡಾ. ವಿಠಲರಾವ್ ಟಿ. ಗಾಯಕ್ವಾಡ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧದ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 30. 7. 07

ಸಾವಿತ್ರಿಬಾಯಿ ಪವಾರ
ಸಂಶೋಧನಾ ವಿದ್ಯಾರ್ಥಿನಿ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಪದವಿಗೆ ಅವಕಾಶ ಮಾಡಿಕೊಟ್ಟ ಮಾನ್ಯ ಕುಲಪತಿಗಳಾಗಿದ್ದ ಡಾ. ಬಿ.ಎ. ವಿವೇಕ ರೈ ಅವರಿಗೆ, ಈಗಿನ ಪ್ರಭಾರಿ ಕುಲಪತಿಗಳಾದ ಮಾನ್ಯ ಡಾ.ಕೆ.ವಿ. ನಾರಾಯಣ ಅವರಿಗೆ, ಮಾನ್ಯ ಕುಲಸಚಿವರಾದ ಶ್ರೀ ವಿ.ಶಂಕರ ಅವರಿಗೆ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ.ಡಿ. ಪಾಂಡುರಂಗಬಾಬು ಅವರಿಗೆ ಕೃತಜ್ಞತೆಗಳು.

ಈ ಅಧ್ಯಯನದ ಕ್ರಮವನ್ನು ಬೋಧಿಸಿ ಪ್ರೀತಿಯಿಂದ ನನ್ನನ್ನು ಪ್ರೋತ್ಸಾಹಿಸಿ ಸೂಕ್ತ ಸಲಹೆ ಮಾರ್ಗದರ್ಶನ ಮತ್ತು ಪ್ರೇರಣೆಯನ್ನು ನೀಡಿದ ನನ್ನ ಗುರುಗಳು ಹಾಗೂ ಮಾರ್ಗದರ್ಶಕರಾದ ಡಾ. ವಿಠಲರಾವ್ ಟಿ. ಗಾಯಕ್ವಾಡ್ ಅವರಿಗೆ ತುಂಬು ಹೃದಯದ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದೇನೆ.

ಭಾಷಾಂತರ ಅಧ್ಯಯನ ವಿಭಾಗದ ಮುಖ್ಯಸ್ಥರು ಹಾಗೂ ನನಗೆ ಹಲವು ಬಾರಿ ಸೂಕ್ತ ಸಲಹೆಯನ್ನು ನೀಡಿದ ಡಾ. ಮೋಹನ್ ಕುಂಟಾರ್ ಅವರಿಗೂ ಡಾ. ಎಂ. ಉಷಾ ಅವರಿಗೂ ಡಾ. ತಾರಕೇಶ್ವರ ಹಾಗೂ ಡಾ. ಕರಿಗೌಡ ಬೀಚನಹಳ್ಳಿಯವರಿಗೂ ಆತ್ಮೀಯ ಕೃತಜ್ಞತೆಗಳು.

ಹಲವಾರು ಸಲ ನನ್ನ ಅಧ್ಯಯನದ ಸಮಸ್ಯೆಗಳನ್ನು ಹೋಗಲಾಡಿಸಿದ ಡಾ. ಸುಬ್ಬಣ್ಣ ರೈ, ಡಾ. ಕೆ.ಕೆ. ಮಾಧವ ಪೆರಾಜೆ ಹಾಗೂ ಡಾ.ಕೆ. ರವೀಂದ್ರನಾಥ, ಪ್ರಸಾರಾಂಗದ ನಿದೇರ್ಶಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ನನ್ನ ಅಧ್ಯಯನಕ್ಕೆ ಪ್ರೋತ್ಸಾಹವನ್ನಿತ್ತ ನನ್ನ ಪೂಜ್ಯ ತಾಯಿ ಅಂಬಿಕಾಬಾಯಿ ಇವರಿಗೆ ಸಹೋದರ ಮೋಹನ ಪವಾರ, ಲಕ್ಷ್ಮಣ್ ದೂರಣ್ಣವರ, ಸಹೋದರಿ ಸುನಂದಾ, ಅಳಿಯಂದಿರಾದ ಹರೀಶ, ಸಚಿನ್, ಸ್ನೇಹಿತ ಎಲ್.ಆರ್. ಪಾಟೀಲ, ಸಹಪಾಠಿ ಸ್ನೇಹಿತರಾದ ಲಲಿತಾ, ಮಾಣಿಕಪ್ಪ, ಸತ್ಯಮೂರ್ತಿ, ತುಕಾರಾಮ, ಧರ್ಮವೀರ, ಸೂಗಣ್ಣ, ಶರಣು, ಕಲಾ, ಸವಿತಾ, ಯಾಸ್ಮೀನ್ ಇವರಿಗೆ ನನ್ನ ಕೃತಜ್ಞತೆಗಳು.

ಸಂಶೋಧನೆಗೆ ಪೂರಕವಾದ ಪುಸ್ತಕಗಳನ್ನು ಓದಿಸಿದ ಗ್ರಂಥಾಲಯದ ಸಿಬ್ಬಂದಿಯವರಿಗೂ ಮತ್ತು ಈ ನನ್ನ ಸಂಪ್ರಬಂಧವನ್ನು ಅಂದವಾಗಿ ಡಿ.ಟಿ.ಪಿ ಮಾಡಿರುವ ಪ್ರಜ್ವಲ್ ಗ್ರಾಫಿಕ್ಸ್‌ನ ಶ್ರೀಮತಿ ಎ. ನಾಗವೇಣಿ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಸಾವಿತ್ರಿಬಾಯಿ ಪವಾರ

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಭಾ**ಷಾಂತರ, ಮೂಲಕೃತಿಯ ಸಾರಸರ್ವಸ್ವವನ್ನು ಇನ್ನೊಂದು ಭಾಷೆಯಲ್ಲಿ ನಿರೂಪಿಸುವ ಪ್ರಕ್ರಿಯೆ. ಯಾವುದೇ ಸಜೀವ ಕೃತಿಗಳಲ್ಲಿ ದೇಹ-ಜೀವಗಳಂತೆ ಶಬ್ದ-ಅರ್ಥ, ವಸ್ತು-ರೀತಿ ಇವು ಅಗಲದ ಹಾಗೆ ಬೆಸೆದುಕೊಂಡಿರುತ್ತದೆ. ಇವುಗಳ ಬೆಸುಗೆ ಭಾಷಾಂತರದಲ್ಲಿ ಸಾಧ್ಯವಾದ ಮಟ್ಟಿಗೆ ಕೆಡದಂತೆ ಬರಮಾಡಿಕೊಳ್ಳುವುದೇ ಭಾಷಾಂತರದ ಗುಟ್ಟು. ಭಾಷಾಂತರವು ಮೂಲತಃ ಗ್ರಹಿಕೆಯ ಒಂದು ಕ್ರಮ. ಇದು ಸಾಹಿತ್ಯಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ವ್ಯವಸ್ಥೆಗಳಿಂದ ರೂಪಿಸಲ್ಪಟ್ಟಿದ್ದು.

ಭಾಷಾಂತರವು ಎರಡು ಭಾಷೆಗಳನ್ನು, ಎರಡು ಭಾಷಿಕ ಸಮುದಾಯಗಳನ್ನು ಹಾಗೂ ಎರಡು ಸಂಸ್ಕೃತಿಗಳನ್ನು ಒಂದುಗೂಡಿಸುವ ಮಹತ್ವಪೂರ್ಣ ಕ್ರಿಯೆಯನ್ನು ಹೊಂದಿರುತ್ತದೆ. ಭಾಷಾಂತರ ಪ್ರಕ್ರಿಯೆ ಸಾಹಿತ್ಯಕ್ಕೆ ಮತ್ತು ಸಮಾಜಕ್ಕೆ ನೂತನ ಸಾಂಸ್ಕೃತಿಕ ಅಧ್ಯಯನ ಮಾರ್ಗವನ್ನು ತೆರೆದಿದೆ. ಆ ಕಾರಣ ಭಾಷಾಂತರಕಾರನು ಮೂಲ ಅರ್ಥಕ್ಕೆ ಚ್ಯುತಿ ಬರದಂತೆ ಹಾಗೂ ಯಾವ ಸ್ವಾತಂತ್ರ್ಯವನ್ನು ವಹಿಸದೆ ಅತೀವ ನಿಷ್ಠೆಯಿಂದ ನಿರ್ವಹಿಸಬೇಕಾದಂತಹ ಕಾರ್ಯವಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಕೈಗೊಂಡಿರುವ 'ಭಾಷಾಂತರ ಕೃತಿಗಳಲ್ಲಿ ವಿಜಯನಗರ : ಒಂದು ಸಾಂಸ್ಕೃತಿಕ ಅಧ್ಯಯನ'ದ ಪ್ರಮುಖ ಉದ್ದೇಶವೇನೆಂದರೆ, 'ವಿಜಯನಗರ ಸಾಮ್ರಾಜ್ಯ' ಕುರಿತು ಇದುವರೆಗೂ ವಿಪುಲ ಸಂಶೋಧನೆ ಮತ್ತು ಅಧ್ಯಯನಗಳು ನಡೆದಿವೆ ಹಾಗೂ ಹಲವಾರು ಗ್ರಂಥಗಳು ಹೊರ ಬಂದಿವೆ. ಆದರೆ, ಭಾಷಾಂತರ ಕೃತಿಗಳಲ್ಲಿ ಬಂದಿರುವ ವಿಜಯನಗರದ ಸಾಂಸ್ಕೃತಿಕ ವಿಶೇಷತೆ ಕುರಿತು ವಿಸ್ತೃತವಾದ ಅಧ್ಯಯನ ನಡೆದಿಲ್ಲ. ಈ ಹಿನ್ನೆಲೆಯಲ್ಲಿ ಭಾಷಾಂತರಗೊಂಡ ಕೃತಿಗಳಲ್ಲಿ ವಿಜಯನಗರವು ಸಾಂಸ್ಕೃತಿಕವಾಗಿ ಹೇಗೆ ಅನಾವರಣಗೊಂಡಿದೆ ಎಂಬುದನ್ನು ಅಧ್ಯಯನ ಮಾಡುವುದು ಅಗತ್ಯವಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಮರಾಠಿ ಹಾಗೂ ಇಂಗ್ಲಿಷ್ ಭಾಷೆಗಳಿಂದ ಕನ್ನಡಕ್ಕೆ ಅನುವಾದಗೊಂಡ ಕನ್ನಡಿಗರ ಕರ್ಮಕತೆ (ಗಳಗನಾಥರ ಕಾದಂಬರಿ) ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ (ಸದಾನಂದ ಕನವಳ್ಳಿ) ಹಾಗೂ ಮರೆಯಲಾಗದ ಮಹಾಸಾಮ್ರಾಜ್ಯ (ಬಾಲಸುಬ್ರಹ್ಮಣ್ಯ) ಕೃತಿಗಳನ್ನು ಅನುಲಕ್ಷಿಸಲಾಗಿದೆ.

ಈ ಅಧ್ಯಯನವು ಭಾಷಾಂತರಗೊಂಡ ಕೃತಿಗಳಲ್ಲಿ ವಿಜಯನಗರ ಸಾಂಸ್ಕೃತಿಕವಾಗಿ ಯಾವ ರೀತಿ ವರ್ಣಿತವಾಗಿದೆ. ಮಧ್ಯಯುಗದಲ್ಲಿ ಇದು ಸಾಂಸ್ಕೃತಿಕವಾಗಿ ವಿದೇಶಿಯರ ಮೇಲೆ ಯಾವ ರೀತಿ ಪ್ರಭಾವ ಬೀರಿದೆ ಎಂಬುದನ್ನು ಕಂಡುಕೊಳ್ಳಬಹುದಾಗಿದೆ. ಹರಿನಾರಾಯಣ ಆಪ್ಟೆಯವರು ಬರೆದಿರುವ 'ವಜ್ರಾಘಾತ' ಅಥವಾ 'ವಿಜಯನಗರ ಚಾ ವಿನಾಶಕಾಲ' ಎಂಬ ಕಾದಂಬರಿಯನ್ನು ಗಳಗನಾಥರು 'ಕನ್ನಡಿಗರ ಕರ್ಮಕತೆ' ಎಂದು ಅನುವಾದಿಸಿದ್ದಾರೆ. ರಾಬರ್ಟ್‌ಸಿವೆಲ್‌ರ 'ದಿ ಫರ್‌ಗಾಟನ್ ಎಂಪೈರ್ ಆಫ್ ವಿಜಯನಗರ' ಕೃತಿಯನ್ನು ಸದಾನಂದ ಕನವಳ್ಳಿಯವರು 'ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ' ಎಂದು ಕನ್ನಡಕ್ಕೆ ಅನುವಾದಿಸಿದ್ದಾರೆ. ಅದೇ ರೀತಿ ಬಿ. ಸೂರ್ಯನಾರಾಯಣರಾವ್‌ರವರು ಬರೆದಿರುವ 'ದಿ ನೆವರ್ ಫರಗಾಟನ್ ಎಂಪೈರ್ ಆಫ್ ವಿಜಯನಗರ' ಎಂಬ ಕೃತಿಯನ್ನು ಬಾಲಸುಬ್ರಹ್ಮಣ್ಯರವರು 'ಮರೆಯಲಾಗದ ಮಹಾಸಾಮ್ರಾಜ್ಯ' ಎಂದು ಕನ್ನಡೀಕರಣಗೊಳಿಸಿದರು. ಇವೆರಡು ಇತಿಹಾಸ ಕೃತಿಗಳು ಇಂಗ್ಲಿಷ್ ಭಾಷೆಯಿಂದಲೂ, ಕನ್ನಡಿಗರ ಕರ್ಮಕತೆ ಎಂಬ ಕಾದಂಬರಿಯು ಮರಾಠಿ ಭಾಷೆಯಿಂದಲೂ, ಅನುವಾದಗೊಂಡಿವೆ. ಈ ಕೃತಿಗಳನ್ನು ಕುರಿತು ಸಾಂಸ್ಕೃತಿಕವಾಗಿ ಅಧ್ಯಯನ ಮಾಡುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಈ ಹಿನ್ನೆಲೆಯಲ್ಲಿ ವಿಜಯನಗರ ಸಾಮ್ರಾಜ್ಯದ ಸಾಂಸ್ಕೃತಿಕ ನೆಲೆಯನ್ನು ಪ್ರಚುರ ಪಡಿಸುವ ಪ್ರಮುಖ ಅಂಶಗಳಾದ ಭಾಷೆ, ಸಾಹಿತ್ಯ, ರಾಜಕೀಯ, ಧರ್ಮ ಮತ್ತು ಸಮಾಜ ಇತ್ಯಾದಿಗಳು ಅನುವಾದಿತ ಕೃತಿಗಳಲ್ಲಿ ಹೇಗೆ ಮಂಡಿತವಾಗಿವೆ ಎಂಬುದನ್ನು ಅರಿತುಕೊಳ್ಳಲು ಸಾಧ್ಯವಾಗುತ್ತದೆ. ವಿಜಯನಗರ ಸಾಮ್ರಾಜ್ಯಕ್ಕೆ ಪ್ರಾಚೀನ ಇತಿಹಾಸವಿದೆ. ಇದು ಇಲ್ಲಿಯ ಸ್ಥಳೀಯ ಅಧ್ಯಯನವಾಗಿ ಈ ನೆಲದ ಸತ್ವವನ್ನು ಮೈಗೂಡಿಸಿಕೊಂಡಿದ್ದರೂ, ಅನುವಾದಿತ ಕೃತಿಗಳನ್ನವಲಂಬಿಸಿ ಚರಿತ್ರೆಯನ್ನು ತಿಳಿಯಬೇಕಾದ ವ್ಯವಸ್ಥೆ ನಿರ್ಮಾಣ ಹೊಂದಿದೆ. ಈ ದೃಷ್ಟಿಯಿಂದ ಭಾರತದ ಮಧ್ಯಕಾಲೀನ ಇತಿಹಾಸದಲ್ಲಿಯ ಸುಪ್ರಸಿದ್ಧವಾದ ರಾಜಮನೆತನವೊಂದರ ಚರಿತ್ರೆಯನ್ನು ತಿಳಿಯಲು ಅನ್ಯಭಾಷಾ ಕೃತಿಗಳನ್ನು ಅವಲಂಬಿಸಬೇಕಾಗಿದೆ. ಈ ನಿಟ್ಟಿನಲ್ಲಿ ಈ ಮೂರು ಕೃತಿಗಳ ಸಾಂಸ್ಕೃತಿಕ ಅಧ್ಯಯನ ಅವಶ್ಯಕವಾಗಿದೆ.

'ಕನ್ನಡಿಗರ ಕರ್ಮಕತೆ' ಎಂಬ ಕಾದಂಬರಿಯು ವಿಜಯನಗರ ಸಾಮ್ರಾಜ್ಯದ ಕೊನೆಯ ಅರಸನಾದ (ಸರದಾರ) ಅಳಿಯ ರಾಮರಾಯನ ಪ್ರತಾಪ ಮತ್ತು ಅವನ ಸಾವಿನ ಭೀಕರತೆಯನ್ನು ತಿಳಿಸುವುದು.

ರಾಮರಾಯನು ತಾನಿಟ್ಟುಕೊಂಡ ಇಸ್ಲಾಂ ಧರ್ಮದ ಮಹಿಳೆಯ ಮಗನಿಂದಲೇ ಪತನಗೊಂಡ ವಿಜಯನಗರದ ವಿನಾಶವನ್ನು ಪ್ರತ್ಯಕ್ಷವಾಗಿ ನಿರೂಪಿಸುವ ಕಾದಂಬರಿಯಾಗಿದೆ.

"ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ' ಇದು ಸದಾನಂದ ಕನವಳ್ಳಿಯವರು ಅನುವಾದಿಸಿರುವ ಇತಿಹಾಸ ಕೃತಿಯಾಗಿದೆ. ಇದರ ಮೂಲ ಸಿವೆಲ್ ಮಹಾಶಯನು ಬರೆದಿರುವ 'ದಿ ಫರ್‌ಗಾಟನ್ ಎಂಪೈರ್' ಎಂಬುದು. ಈ ಕೃತಿಯು 'ವಿಜಯನಗರ ಸಾಮ್ರಾಜ್ಯ' ಕುರಿತ ಆದಿಗ್ರಂಥ ಹಾಗೂ ಅಮೂಲ್ಯ ಆಕರ ಗ್ರಂಥ. ವಿಜಯನಗರ ಮಹಾಸಾಮ್ರಾಜ್ಯದ ವಿಸ್ತಾರ, ಘನತೆ, ವೈಭವಗಳ ಬಗೆಗೆ ಜಗತ್ತಿನ ಗಮನ ಸೆಳೆದ ಪ್ರಥಮ ಗ್ರಂಥ. ರಾಬರ್ಟ್ ಸಿವೆಲ್ ಸಾಹಿತಿಯಲ್ಲ ಹಾಗೂ ಈ ದೇಶದವನಲ್ಲ ಅವನು ವಿದೇಶದಿಂದ ಇಲ್ಲಿಗೆ (ಬಳ್ಳಾರಿ) ಬಂದು ತನ್ನ ಮೇಲಧಿಕಾರಿಗಳಿಗೆ ವಿಜಯನಗರ ಕುರಿತು ತಿಳಿಸಲೋಸುಗ 'ದಿ ಫರ್‌ಗಾಟನ್ ಎಂಪೈರ್' ಕೃತಿಯನ್ನು ರಚಿಸಿದನು."[೧] ಇದು ಇಂಗ್ಲಿಷ್ ಭಾಷೆಯಲ್ಲಿದ್ದು ಸದಾನಂದ ಕನವಳ್ಳಿಯವರು ಕನ್ನಡಕ್ಕೆ ತಂದಿದ್ದಾರೆ. ಅಂದರೆ ಯಥಾವತ್ತಾಗಿ ಭಾಷಾಂತರ ಮಾಡಿದ್ದಾರೆ. ಈ ಕೃತಿಯನ್ನು ಓದುತ್ತಿದ್ದರೆ, ನಾವು ದಿಗ್ಭ್ರಮೆಗೆ ಒಳಗಾಗುತ್ತೇವೆ. ಇಂತಹ ಸಕಲ ವೈಭವಗಳಿಂದ ಮೆರೆದ ಸಾಮ್ರಾಜ್ಯವೊಂದು ಕನ್ನಡ ನಾಡಿನಲ್ಲಿ ಇತ್ತೆ? ಎಂದು ವಿಸ್ಮಯವಾಗುತ್ತದೆ. ವೈಭವಯುತವಾದ ಈ ಸಾಮ್ರಾಜ್ಯವು ಅವಶೇಷವಾಗಿ ಹೋಗಿದ್ದರೂ ಅದರ ಪಳೆಯುಳಿಕೆಗಳು ಇನ್ನೂ ಗಟ್ಟಿಯಾಗಿ ಉಳಿದುಕೊಂಡಿವೆ. ಮರೆಯಲು ಪ್ರಯತ್ನಿಸಿದರೂ ಅದು ಮರೆಯಲಾಗದ ಮಹಾಸಾಮ್ರಾಜ್ಯ "ದುರಾದೃಷ್ಟವಶಾತ್ ಈ ಕೃತಿಗೆ ಮರೆತುಹೋದ ಮಹಾಸಾಮ್ರಾಜ್ಯ ಎಂದು ಏಕೆ ಹೆಸರಿಟ್ಟರೊ ಗೊತ್ತಿಲ್ಲ. ವಿಜಯನಗರ ಇತಿಹಾಸವನ್ನು ಕುರಿತಂತೆ ಅವರು ನೀಡಿರುವ ಕಾಣಿಕೆ ಅಪಾರ ಮಹತ್ವವುಳ್ಳದ್ದು ಆದರೆ ಈ ಅಮೂಲ್ಯ ಹೊತ್ತಿಗೆಯಲ್ಲಿ ಶೀರ್ಷಿಕೆಯ ಬಗ್ಗೆ ಯಾವುದೇ ಸಮರ್ಥನೆಯನ್ನು ನೀಡುವ ಪ್ರಯತ್ನವನ್ನು ಮಾಡಿಲ್ಲ."[೨] ಮರೆತುಹೋದ ಎನ್ನುವ ಪದ ಏಕೆ ಇಟ್ಟರು ಎಂಬುದರ ಕುರಿತು ತಮ್ಮ ಗ್ರಂಥದಲ್ಲಿ ಎಲ್ಲೂ ಹೇಳಿಕೊಂಡಿಲ್ಲ. ಏಕೆಂದರೆ ವಿಜಯನಗರ ಸಾಮ್ರಾಜ್ಯವು ಮರೆತು ಹೋಗುವಷ್ಟು ದುರ್ಬಲವಾದ ಸಾಮ್ರಾಜ್ಯವಲ್ಲ. ವೈಭವದ ಉತ್ತುಂಗಕ್ಕೆ ಏರಿ ಕಾಲಾನಂತರದಲ್ಲಿ ಪರಕೀಯರ ವಶವಾಗಿ ನಂತರ ಹಾಳು ಹಂಪೆಯಾಗಿದ್ದರೂ, ಶತಶತಮಾನಗಳಿಂದ ಅದು ತನ್ನ ಗತವೈಭವವನ್ನು ಸಾರಿ ಹೇಳುತ್ತಿದೆ. ಇಲ್ಲಿಯ ಪ್ರತಿಯೊಂದು ಕಲ್ಲೂ ಸಹ ವಿಜಯನಗರ ಸಾಮ್ರಾಜ್ಯದ ವೈಭವವನ್ನು ದಂತಕತೆಯಾಗಿ ಹೇಳುತ್ತಿರುವುದಾಗಿವೆ. ಆದರೆ ಸಿವೆಲ್ ಬ್ರಿಟೀಷ್ ಅಧಿಕಾರಿ ಅವನ ಉದ್ದೇಶ ಈ ಮಹಾಸಾಮ್ರಾಜ್ಯ ಜನರ ದೃಷ್ಟಿಯಲ್ಲಿ ಮರೆತು ಹೋಗಿದೆ, ಈ ಮೂಲಕ ಕನ್ನಡಿಗರು ಸ್ವಾತಂತ್ರ್ಯ ಹೋರಾಟದ ಸ್ಫೂರ್ತಿ ಪಡೆಯಲು ಸಾಧ್ಯವಿಲ್ಲ ಎಂದು ಪ್ರತಿಪಾದಿಸುವುದೇ ಆಗಿದ್ದಿರಬೇಕು.

ಭಾರತೀಯರಾದ ಬಿ. ಸೂರ್ಯನಾರಾಯಣರಾವ್ ಇವರು ಬರೆದ ಐತಿಹಾಸಿಕ ಕೃತಿ 'ದಿ ನೆವರ್ ಫರ್‌ಗಾಟನ್ ಎಂಪೈರ್' ಎಂಬುದು ಇವರ ಮಹತ್ವಾಕಾಂಕ್ಷೆಯ ಕೃತಿ. ಸಿವೆಲ್‌ರ ಕೃತಿಯ ಧ್ವನಿಯನ್ನು

ವಿರೋಧಿಸಿ ಅಗತ್ಯವಾದ ಆಕರ ಸಾಮಗ್ರಿಗಳ ಮೂಲಕವಾಗಿ ರಚನೆಗೊಂಡ ಕೃತಿ ಇದು. ವಿರೋಧದಿಂದ ಬಂದರೂ ಸಾಂಸ್ಕೃತಿಕ ಅಧ್ಯಯನದ ಮತ್ತೊಂದು ಬಗೆಯನ್ನು ಓದುಗರಿಗೆ ತೋರಿಸಿಕೊಟ್ಟಿದೆ. ಅದ್ಭುತ ಸಂಸ್ಕೃತಿಯನ್ನು ಸೃಷ್ಟಿಸಿದ ವಿಜಯನಗರ ಸಾಮ್ರಾಜ್ಯವು ಕಂಡ ವಿವಿಧ ವಂಶಗಳ ಪ್ರಾಬಲ್ಯ ಮತ್ತು ರಾಜಕೀಯ ಏಳುಬೀಳುಗಳ ಇತಿಹಾಸ. ಹಲವು ಘಟನೆಗಳನ್ನು ದೇಶಿಯ ಸಾಹಿತ್ಯ ಸಂಸ್ಕೃತಿಯ ಮಾಹಿತಿ, ಶಾಸನ, ಸಮಕಾಲೀನ ಬರಹ, ದೇಶಿ ಮತ್ತು ವಿದೇಶಿಯರ ಪ್ರವಾಸ ಕಥನ ಮತ್ತು ಅಳಿದುಳಿದ ಹಂಪೆಯ ಕ್ಷೇತ್ರ ಕಾರ್ಯವನ್ನು ಮಾಡಿ ಈ ಕೃತಿಯನ್ನು ರಚಿಸಿದರು. ವಿಜಯನಗರದ ಉತ್ಖನನದಲ್ಲಿ ಹಲವು ವರ್ಷಗಳಿಂದ ತೊಡಗಿದ್ದ ಬಿ. ಸೂರ್ಯನಾರಾಯಣರಾವ್ ಅವರಿಗೆ ಈ ಪುಸ್ತಕವು ಆಸಕ್ತಿದಾಯಕವಾಗಿತ್ತು. ಭಾಷಾಂತರ ಕೃತಿ ಕನ್ನಡಕ್ಕೆ ಲಭ್ಯವಾಗಿದೆ. ಸಿವೆಲ್‌ರ ಕಾಲ ೧೯೦೦ ಆಗಿದ್ದರೆ ಬಿ. ಸೂರ್ಯನಾರಾಯಣರಾವ್ ಅವರ ಕಾಲ ೧೯೦೫ ಎನ್ನುವುದನ್ನು ಗಮನಿಸಬೇಕು. ಇಬ್ಬರು ಬೇರೆ ಬೇರೆ ಲೇಖಕರು ಇತಿಹಾಸ ಕೃತಿಗಳನ್ನು ಭಾಷಾಂತರ ಮಾಡಿದರೂ ಭಾಷಾಂತರಕಾರರ ಆಶಯ ಒಂದೇ ಆಗಿತ್ತು.

ಈ ಸಾಮ್ರಾಜ್ಯವು ತನ್ನ ಆಳ್ವಿಕೆಯ ಅವಧಿಯಲ್ಲಿ ಹಲವಾರು ದೇಶಗಳ ಯಾತ್ರೀಕರನ್ನು ವ್ಯಾಪಾರಿಗಳನ್ನು ತನ್ನ ವೈಭವದಿಂದ ತನ್ನೆಡೆಗೆ ಸೆಳೆದಿತ್ತು. ಆದರೆ ಇಂದು ಅದರ ಅಳಿದುಳಿದ ಅವಶೇಷಗಳನ್ನು ನೋಡುವ ಪರಿಸ್ಥಿತಿಯೊದಗಿದೆ. ಇಂದಿಗೂ ಸಹ ಹಂಪೆಯು ವಿದೇಶಿಯರನ್ನು ಆಕರ್ಷಿಸುತ್ತಿರುವುದನ್ನು ನೋಡಿದಾಗ ಈ ಸಾಮ್ರಾಜ್ಯದ ಗತವೈಭವವನ್ನು ಊಹಿಸಲು ಸಾಧ್ಯವಾಗಬಹುದು.

ಈ ನೆಲದ ಸಾಮ್ರಾಜ್ಯವನ್ನು ಕುರಿತು ಬರೆದ ಅನ್ಯಭಾಷಿಕರ ದೃಷ್ಟಿಕೋನಗಳು ವಿಭಿನ್ನವಾಗಿವೆ. ಅವುಗಳಲ್ಲಿ ಅನೇಕ ಕೃತಿಗಳು ಕನ್ನಡದಲ್ಲಿ ಭಾಷಾಂತರಗೊಂಡು ಪ್ರಕಟವಾಗಿವೆ. ಕನ್ನಡದಲ್ಲಿ ಭಾಷಾಂತರ ಮಾಡುವಾಗಿನ ಸಮಕಾಲೀನ ಅಗತ್ಯ ಮತ್ತು ಕನ್ನಡದ ಸಮಕಾಲೀನ ಸಾಂಸ್ಕೃತಿಕ ಪರಿಸರ ಇವುಗಳಿಂದ ಭಾಷಾಂತರ ಕೃತಿಗಳನ್ನು ಅಧ್ಯಯನ ಮಾಡುವುದು ಇಂದಿನ ಅಗತ್ಯಗಳಲ್ಲಿ ಒಂದು. ಈ ಹಿನ್ನೆಲೆಯಲ್ಲಿ ಪ್ರಾತಿನಿಧಿಕವಾಗಿ ಕನ್ನಡಕ್ಕೆ ಭಾಷಾಂತರಗೊಂಡು ಪ್ರಕಟವಾದ ಕೃತಿಗಳನ್ನು ಆಯ್ದು ವಿಜಯನಗರ ಸಾಮ್ರಾಜ್ಯದ ಉತ್ಥಾನ-ಪತನದ ಸಂಕಥನವನ್ನು ಕಂಡರಿಸುವ ಪ್ರಯತ್ನ ಮಾಡಿರುತ್ತೇನೆ.

ಹದಿನಾರನೆಯ ಶತಮಾನದ ಹೊತ್ತಿಗೆ ಪತನಗೊಂಡ ಈ ವಿಜಯನಗರ ಸಾಮ್ರಾಜ್ಯ ಈಗ ಹಾಳು ಹಂಪೆಯಾಗಿದೆ. ಅದನ್ನು ಆಧುನಿಕ ಯುಗದಲ್ಲಿ ವಿದ್ವಾಂಸರು ಬೇರೆ ಬೇರೆ ನೆಲೆಗಳಿಂದ ವಿಶೇಷವಾಗಿ ಅಧ್ಯಯನ ಮಾಡುತ್ತಲೇ ಬಂದಿದ್ದಾರೆ. ಈ ಕುರಿತಂತೆ ಹಲವಾರು ಗ್ರಂಥಗಳು ಪ್ರಕಟವಾಗಿವೆ. ಅವುಗಳಲ್ಲಿ ಮೂರು ಪ್ರಮುಖ ಗ್ರಂಥಗಳನ್ನು ಅಧ್ಯಯನ ಮಾಡುವ ಮೂಲಕ ಸಾಂಸ್ಕೃತಿಕ ವಿಜಯನಗರವನ್ನು ಗುರುತಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ವೈಭವದ ಉನ್ನತ ಶೃಂಗವನ್ನು ತಲುಪಿ "ಸುವರ್ಣಯುಗ"ವೆಂದು ಕರೆಸಿಕೊಂಡಿರುವ ವಿಜಯನಗರದ ಕೀರ್ತಿ, ಪ್ರತಿಷ್ಠೆಗಳು ಕೇವಲ ಕರ್ನಾಟಕಕ್ಕೆ

ಮಾತ್ರ ಸೀಮಿತವಾಗಿರದೆ ದಕ್ಷಿಣ ಭಾರತದ ಉದ್ದಗಲಕ್ಕೂ ಹಬ್ಬಿ ಇಡೀ ಭಾರತವನ್ನೇ ಆಕರ್ಷಿಸಿದೆ. ಅನೇಕ ಸ್ವದೇಶಿ ಮತ್ತು ವಿದೇಶಿ ಬರಹಗಾರರು, ವರ್ತಕರು, ಯಾತ್ರಿಕರು ವಿಜಯನಗರವನ್ನು ಸಂದರ್ಶಿಸಿ ಅದರ ರಮ್ಯತೆ, ಭವ್ಯತೆ, ಆರ್ಥಿಕ ಸಮೃದ್ಧತೆ ಮತ್ತು ರಾಜಕೀಯ ಸ್ಥಿರತೆಯನ್ನು ಕಣ್ಣಾರೆ ಕಂಡು ತಂತಮ್ಮ ಕೃತಿಗಳಲ್ಲಿ ವಿವರಿಸುವ ಮೂಲಕ ಶ್ಲಾಘಿಸಿದ್ದಾರೆ.

ಅಂದು ಸಿರಿ ಸಮೃದ್ಧಿಗಳಿಂದ ಮೆರೆದ ಈ ಮಹಾಸಾಮ್ರಾಜ್ಯ ಇಂದು ಗತವೈಭವವನ್ನು ಸಾರುತ್ತಿರುವ ಮೂಕ ಸಾಕ್ಷಿಯಾಗಿ ನಿಂತಿದೆ. ವೈಭವದಿಂದ ಬೀಗುತ್ತಿರುವ ರಾಜಬೀದಿಗಳು ಇಂದು ಸ್ಮಶಾನ ಮೌನವನ್ನು ಧರಿಸಿ ನಿಂತಿವೆ. ಇಟಲಿ ದೇಶದ ರೋಂ ಸಾಮ್ರಾಜ್ಯ ಇಂದಿಗೂ ಹೇಗೆ ಐತಿಹಾಸಿಕ ನೆಲೆಯಿಂದ ಪರಿಗಣಿಸಲಾಗುತ್ತಿದೆಯೋ ಹಾಗೆಯೇ ವಿಜಯನಗರ ಸಾಮ್ರಾಜ್ಯ ಅರ್ಥಾತ್ ಹಂಪೆ ಕೂಡ ಐತಿಹಾಸಿಕ ನೆಲೆಯಿಂದ ಮುಖ್ಯವೆಂದು ಗುರುತಿಸಲ್ಪಟ್ಟಿದೆ. ಇದರ ಸಂರಚನೆಗೆ ಯಾವುದೇ ಹೊಸ ಸೇರ್ಪಡೆಯನ್ನು ವಿಶ್ವಪರಂಪರೆಯ ಪ್ರಾಧಿಕಾರವು ವಿರೋಧಿಸುತ್ತಿದೆ. ಕಾರಣ ಇಂಥ ಶಿಲ್ಪಕಲಾ ವೈಭವದ ವಿಶಿಷ್ಟ ನಗರ ಕೆಲವೇ ಕೆಲವು, ಜಾಗತಿಕ ಮಟ್ಟದಲ್ಲಿ 'ಎಲ್ಲಾ ದಾರಿಗಳು ರೋಂನ ಕಡೆಗೆ ಸಾಗುತ್ತವೆ' ಎಂದು ಹೇಳಿರುವಂತೆಯೇ ಭಾರತ ಮತ್ತು ಕರ್ನಾಟಕದ ನೆಲೆಯಲ್ಲಿ ಎಲ್ಲಾ ದಾರಿಗಳೂ ಹಂಪಿಯ ಕಡೆಗೆ ಸಾಗಬೇಕು ಎಂಬ ಪರಿಸ್ಥಿತಿಯನ್ನು ನಾವು ನಿರ್ಮಾಣ ಮಾಡಬೇಕಾಗಿದೆ. ಅದಕ್ಕೆ ಈ ಕೃತಿಗಳ ಮಾಹಿತಿಗಳನ್ನು ಮುಖ್ಯವಾಗಿ ಪರಿಗಣಿಸಬೇಕಾಗಿದೆ.

ಭಾಷಾಂತರಗೊಂಡಿರುವ ಈ ಮೂರು ಕೃತಿಗಳು ವಸಾಹತುಶಾಹಿ ಕಾಲಕ್ಕೆ ಸೇರಿದವುಗಳಾಗಿದ್ದು ಕನ್ನಡಿಗರ ವೈಚಾರಿಕ ಪ್ರಜ್ಞೆಯನ್ನು ಭಿನ್ನ ನೆಲೆಗಳಿಂದ ರೂಪಿಸಿವೆ. ಭಾಷಾಂತರಗೊಂಡ ಕೃತಿಗಳನ್ನು ಅಧ್ಯಯನ ಮಾಡುವುದರ ಮೂಲಕ ಆ ಕೃತಿಗಳ ಅಡಕವಾಗಿರುವ ಸಾಂಸ್ಕೃತಿಕ ಆಶಯವನ್ನು ಗುರುತಿಸಬೇಕಾಗಿದೆ.

ಕ್ರಿ.ಶ. ೧೩೩೬ರಲ್ಲಿ, ವಿದ್ಯಾರಣ್ಯರ ನೇತೃತ್ವದಲ್ಲಿ ಹರಿಹರ ಮತ್ತು ಬುಕ್ಕರಿಂದ ಸ್ಥಾಪನೆಗೊಂಡ ವಿಜಯನಗರ ಸಾಮ್ರಾಜ್ಯವು, ಮುಂದೆ ಹಲವಾರು ರಾಜಮಹಾರಾಜರಿಂದ ಬಹಳ ವೈಭವದಿಂದ ಮೆರೆಯಿತು. ಕೃಷ್ಣದೇವರಾಯನ ಕಾಲಕ್ಕೆ ಸಾಂಸ್ಕೃತಿಕವಾಗಿ ಹಲವು ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿದ ಈ ಮಹಾಸಾಮ್ರಾಜ್ಯವು, ಅಳಿಯ ರಾಮರಾಯನ ಕಾಲಕ್ಕೆ ೧೫೬೫ರಲ್ಲಿ ತಾಳಿಕೋಟೆ ಕದನದಲ್ಲಿ ಬಹುಮನಿ ಸಾಮ್ರಾಜ್ಯದ ಆದಿಲ್‌ಶಾಹಿ ಮತ್ತು ಅನುಚರರಿಂದ ರಾಮರಾಯನ ಮರಣದೊಂದಿಗೆ ಸೋಲನ್ನನುಭವಿಸಿ ಪತನವಾಯಿತು. ಆದಿಲ್‌ಶಾಹಿಗಳು ಹಲವು ದಿನಗಳವರೆಗೆ ಈ ಸಾಮ್ರಾಜ್ಯವನ್ನು ದೋಚಿದರು. ಎಲ್ಲ ಅರಮನೆಯ ಕಟ್ಟಡಗಳು ನೆಲಸಮವಾದವು. ಮುಂದೆ ವಿಜಯನಗರ ಸಾಮ್ರಾಜ್ಯವು ಹಾಳು ಹಂಪೆಯಾಗಿ ಉಳಿದುಕೊಂಡಿತು.

ಅನಂತರದಲ್ಲಿ ಸು. ಕ್ರಿ.ಶ. ೧೫೬೫ ರಿಂದ ೧೯೦೦ರ ಆಸುಪಾಸಿನವರೆಗೂ ವಿಜಯನಗರ ಸಾಮ್ರಾಜ್ಯ ಕುರಿತು ಯಾವುದೇ ಕೃತಿಗಳು ಲಭ್ಯವಾಗುವುದಿಲ್ಲ. ಕ್ರಿ.ಶ.ಸು. ೧೯೦೦ರಲ್ಲಿ ರಾಬರ್ಟ್ ಸಿವೆಲ್ 'ದಿ ಫರ್‌ಗಾಟನ್ ಎಂಪೈರ್' ಕೃತಿಯನ್ನು ರಚಿಸಿದನು. ಈ ಹೊತ್ತಿಗೆ ಭಾರತದಲ್ಲಿ ಸ್ವಾತಂತ್ರ್ಯ ಚಳುವಳಿ ಪ್ರಾರಂಭವಾಗಿತ್ತು. ಹರಿನಾರಾಯಣ ಆಪ್ಟೆಯವರು ಮರಾಠಿ ಭಾಷೆಯಲ್ಲಿ 'ವಿಜಯನಗರ ಚಾ ವಿನಾಶ ಕಾಲ' ಅಥವಾ 'ವಜ್ರಾಘಾತ' ಎನ್ನುವ ಕಾದಂಬರಿಯನ್ನು ರಚಿಸಿದರು. ಇದು ಅಳಿಯ ರಾಮರಾಯನ ಔನ್ನತ್ಯ ಮತ್ತು ಪತನದೊಂದಿಗೆ ವಿಜಯನಗರದ ವಿನಾಶವನ್ನು ಸೂಚಿಸುವ ಕೃತಿಯಾಗಿದೆ. ಗಳಗನಾಥರು ಈ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿ 'ಕನ್ನಡಿಗರ ಕರ್ಮಕತೆ' ಅಂದರೆ ಕನ್ನಡಿಗರು ರಾಜ್ಯ ಕಟ್ಟುವ ಕೆಲಸವನ್ನು ಮಾಡಿದ್ದಾರೆ ಎನ್ನುವುದನ್ನು ತಮ್ಮ ಕೃತಿಯ ಮೂಲಕ ಹೇಳಿದರು. ಈ ಕೃತಿಯು ಸಹ ಸ್ವಾತಂತ್ರ್ಯ ಚಳುವಳಿಗೆ ಪ್ರಚೋದನೆಯಾಯಿತು. ನಂತರ ಸಿವೆಲ್‌ರ ಇತಿಹಾಸ ಕೃತಿ 'ದಿ ಫರ್‌ಗಾಟನ್ ಎಂಪೈರ್' ಕೃತಿಯನ್ನು ಸದಾನಂದ ಕನವಳ್ಳಿಯವರು ೧೯೯೨ರಲ್ಲಿ 'ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ'ವೆಂದು ಕನ್ನಡಕ್ಕೆ ಅನುವಾದ ಮಾಡಿದರು. ಸೂರ್ಯನಾರಾಯಣರಾವ್ ಅವರು ಬರೆದ 'ದಿ ನೆವರ್ ಫರ್‌ಗಾಟನ್ ಎಂಪೈರ್' ಕೃತಿಯನ್ನು ಬಾಲಸುಬ್ರಹ್ಮಣ್ಯರವರು 'ಮರೆಯಲಾಗದ ಮಹಾಸಾಮ್ರಾಜ್ಯ' ಎಂದು ಕನ್ನಡಕ್ಕೆ ಅನುವಾದಿಸಿದರು. ಅಂದು ವಿಜಯನಗರ ಸಾಮ್ರಾಜ್ಯವು ತನ್ನತನವನ್ನು ಕಳೆದುಕೊಂಡಂತೆ. ಭಾರತೀಯರು ೧೯೦೦ರ ಕಾಲಕ್ಕೆ ಅಂದರೆ ಈ ಕೃತಿಗಳು ಬಂದ ಕಾಲಕ್ಕೆ ಕರ್ನಾಟಕದಲ್ಲಿ ಆಗಲೇ ಸ್ವಾತಂತ್ರ್ಯ ಸಂಗ್ರಾಮ ಪ್ರಾರಂಭವಾಗಿತ್ತು. ಆ ಸಂದರ್ಭದಲ್ಲಿ ವಿಜಯನಗರ ಸಂಬಂಧಿ ಭಾಷಾಂತರ ಕೃತಿಗಳು ಚಳುವಳಿಗೆ ಸ್ಫೂರ್ತಿದಾಯಕವಾದವು.

"ವಿಜಯನಗರ ಹಾಗೂ ರಾಜ್ಯ ಸಂಸ್ಥಾಪನೆಯ ಘಟನೆ ಕ್ರಿ.ಶ. ೧೩೩೬ ಕ್ಕೂ ಮುಂಚೆ ದಕ್ಷಿಣ ಭಾರತವೆಲ್ಲ ಪ್ರಾಚೀನ ಹಿಂದೂ ರಾಜ್ಯಗಳ ಅಧೀನದಲ್ಲಿದ್ದಿತು. ಈ ರಾಜ್ಯಗಳು ಎಷ್ಟು ಪ್ರಾಚೀನವಾದವುಗಳೆಂದರೆ ಅವುಗಳ ಆದಿಯನ್ನು ಎಂದೂ ಕಂಡುಹಿಡಿಯಲಾಗಲಿಲ್ಲ. ಆದರೆ ಹದಿನಾರು ಶತಮಾನಗಳ ಹಿಂದೆ ಶಿಲೆಯಲ್ಲಿ ಕೆತ್ತಲಾದ ಶಾಸನಗಳಲ್ಲಿ ಆ ರಾಜ್ಯಗಳನ್ನು ಉಲ್ಲೇಖಿಸಲಾಗಿದೆ. ಮಧುರೆಯ ಪಾಂಡ್ಯರು, ತಂಜಾವೂರಿನ ಚೋಳರು ಮತ್ತು ಇನ್ನಿತರರು, ವಿಜಯನಗರ ಅಸ್ತಿತ್ವಕ್ಕೆ ಬಂದಾಗ ಭೂತಕಾಲಕ್ಕೆ ಮಂಗಳ ಹಾಡಲಾಯಿತು. ಮತ್ತು ಹೊಸ ರಾಜ್ಯದ ದೊರೆಗಳು ದಕ್ಖನ ಮತ್ತು ಸಿಲೋನಗಳ ಮಧ್ಯೆ ಹಬ್ಬಿರುವ ನಾಡಿಗೆ ಅಧಿಪತಿಗಳಾದರು."[೨]

"ಗ್ರೀಕ್ ಮತ್ತು ರೋಮ್ ಸಾಮ್ರಾಜ್ಯಗಳು ಎಂದೆಂದೂ ಮರೆಯಲಾಗದ ಸಾಮ್ರಾಜ್ಯಗಳಾದವು. ಕಾಲಾನಂತರದ ಪ್ರಕ್ರಿಯೆಯಲ್ಲಿ ಅವು ಇಂದು ತಮ್ಮ ಬೃಹದಾಕಾರದ ಕಟ್ಟಡಗಳ ಪಳೆಯುಳಿಕೆಗಳನ್ನು ಉಳಿಸಿಕೊಂಡಿರಲಿಕ್ಕಿಲ್ಲ. ಆದರೆ ಈ ಸಾಮ್ರಾಜ್ಯಗಳ ಬೌದ್ಧಿಕ ಕೊಡುಗೆ ಮಾತ್ರ ಪೀಳಿಗೆಯಿಂದ ಪೀಳಿಗೆಯವರೆಗೆ ವಿಜ್ಞಾನ, ಕಲೆ ಮತ್ತು ಸಾಹಿತ್ಯಗಳ ಮೂಲಕ ಎಂತಹ ಅಡಿಪಾಯವನ್ನು ಹಾಕಿದೆಯೆಂದರೆ

ಪ್ರಪಂಚದ ಐತಿಹಾಸಿಕ ವೇದಿಕೆಯ ಮೇಲೆ ಗ್ರೀಸ್ ಮತ್ತು ರೋಮ್ ಸಾಮ್ರಾಜ್ಯಗಳು ಮರೆಯಾದರೂ ಅವುಗಳ ಪ್ರಭಾವ ಇಂದಿಗೂ ನವೀನ, ಶಕ್ತಿಶಾಲಿಯಾಗಿದೆ. ಇದೇ ರೀತಿ ಅನೇಕ ಕಾರಣಗಳಿಂದ ವಿಜಯನಗರದ ಇತಿಹಾಸವೂ ಮರೆಯಲಾಗದಂತಿದ್ದು ಆ ವಿವರಗಳನ್ನು ಮುಂದೆ ಉಲ್ಲೇಖಿಸಲಾಗಿದೆ."[೪]

'ಕನ್ನಡಿಗರ ಕರ್ಮಕತೆ' ಎಂಬ ಕಾದಂಬರಿಯಲ್ಲಿ "ಘನತರವಾದ ವಿಜಯನಗರ ಸಾಮ್ರಾಜ್ಯವು ಪ್ರಸಿದ್ಧ ತಾಳಿಕೋಟೆಯ ಕಾಳಗದಿಂದ ಹೇಗೆ ರಸಾತಳಕ್ಕೆ ಹೋಯಿತೆಂಬುದನ್ನು ವಿಸ್ತೃತವಾಗಿ ಹಾಗೂ ಬಹು ಮನೋಹರವಾಗಿ ವರ್ಣಿಸಲಾಗಿದೆ. ಇದನ್ನು ಓದುವುದರಿಂದ ಹಲವು ವಿಕಾರಗಳು, ವಿಚಾರಗಳು ಉತ್ಪನ್ನವಾಗದೆ ಇರಲಿಕ್ಕಿಲ್ಲ. ರಾಮರಾಜ, ತಿರುಮಲ, ವೆಂಕಟಾದ್ರಿ, ಮೆಹರ್ಜಾನ, ರಣಮಸ್ತಖಾನ ಮೊದಲಾದ ಪಾತ್ರಗಳ ಚರಿತ್ರ ವಾಚನದಿಂದ ಮನಸ್ಸು ತಲ್ಲೀನವಾಗಿ ಹೋಗುತ್ತದೆ! ಈ ವಿಸ್ತೃತ ಕಾದಂಬರಿಯ ವಿವರವನ್ನು ಮುಂದೆ ಉಲ್ಲೇಖಿಸಲಾಗಿದೆ."[೫]

## ವ್ಯಾಪ್ತಿ

ವಿಶ್ವಪರಂಪರೆಯ ಪಟ್ಟಿಯಲ್ಲಿರುವ ಐತಿಹಾಸಿಕ ಸ್ಥಳ ಹಂಪಿಯು ಹಿಂದೆ ವಿಜಯನಗರ ಅರಸರ ಹೆಮ್ಮೆಯ ರಾಜಧಾನಿಯಾಗಿ ಮೆರೆದು ತನ್ನ ಗತವೈಭವವನ್ನು ಕಂಡಿದೆ. ಕ್ರಿ.ಶ. ೧೩೩೬ ರಿಂದ ೧೫೬೫ ರ ವರೆಗೆ ತನ್ನ ಅವನತಿಯನ್ನು ಹೊಂದಿತು. ಇಲ್ಲಿ ವಿಜಯಗರ ಸಾಮ್ರಾಜ್ಯದ ಉತ್ಥಾನ ಮತ್ತು ಪತನಕ್ಕಿಂತಲೂ ಸಾಂಸ್ಕೃತಿಕವಾಗಿ ಅಧ್ಯಯನ ಮಾಡುವುದು ಅಗತ್ಯವಾಗಿದೆ.

ಸಾಮ್ರಾಜ್ಯವು ತನ್ನ ಆಳ್ವಿಕೆಯ ಅವಧಿಯಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಭಾಷಿಕವಾಗಿ ಸಾಹಿತ್ಯಿಕವಾಗಿ ಹಾಗೂ ಸಂಗೀತ ನೃತ್ಯ ಕಲೆಗಳಿಂದಾಗಿ ಅತ್ಯಂತ ವೈಭವಯುತವಾಗಿ ಮೆರೆದಿತ್ತು. ಇಂತಹ ಸಮೃದ್ಧ ನಾಡಿನ ಪರಂಪರೆಯನ್ನು ಸಾಂಸ್ಕೃತಿಕವಾಗಿ ಅಧ್ಯಯನ ಮಾಡಲು ಪ್ರಾತಿನಿಧಿಕವಾಗಿ ಮೂರು ಕೃತಿಗಳನ್ನು ಆಯ್ದುಕೊಳ್ಳಲಾಗಿದೆ. ಹಾಗೂ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಇನ್ನುಳಿದ ಕೃತಿಗಳನ್ನು ಅಧ್ಯಯನ ಮಾಡುವುದರ ಮೂಲಕ ಸಾಂಸ್ಕೃತಿಕ ವಿಜಯನಗರವನ್ನು ಗುರುತಿಸಲಾಗುವುದು.

## ಕೊನೆ ಟಿಪ್ಪಣಿಗಳು

೧. ಸದಾನಂದ ಕನವಳ್ಳಿ (ಅನು.) : *ಮರೆತುಹೋದ ಮಹಾಸಾಮ್ರಾಜ್ಯ*, ಮುನ್ನುಡಿ.

೨. ಬಾಲಸುಬ್ರಹ್ಮಣ್ಯ (ಅನು.) : *ಮರೆಯಲಾಗದ ಮಹಾಸಾಮ್ರಾಜ್ಯ*, ಪು. ೧೪.

೩. ಸದಾನಂದ ಕನವಳ್ಳಿ (ಅನು.) : *ಮರೆತುಹೋದ ಮಹಾಸಾಮ್ರಾಜ್ಯ*, ಪು.೧

೪. ಬಾಲಸುಬ್ರಹ್ಮಣ್ಯ (ಅನು.) : *ಮರೆಯಲಾಗದ ಮಹಾಸಾಮ್ರಾಜ್ಯ*, ಪು.೧೪

೫. ಗಳಗನಾಥ (ಅನು.) : *ಕನ್ನಡಿಗರ ಕರ್ಮಕತೆ*, (ಸಂ.೨)

* * * *

ಅಧ್ಯಾಯ ೨

## ವಿಜಯನಗರ ಅಂದು - ಇಂದು

ಭಾರತದಲ್ಲಿ ಪೂರ್ವ ದಿಕ್ಕಿಗೆ ಹರಿಯುವ ಕೆಲವೇ ನದಿಗಳಲ್ಲಿ ತುಂಗಭದ್ರೆಯು ಒಂದು. ಸನಾತನ ನಂಬಿಕೆಯ ಪ್ರಕಾರ ಇದೊಂದು ಪುಣ್ಯಕ್ಷೇತ್ರ. ಹಾಗಾಗಿಯೇ ಇಲ್ಲಿ ಧಾರ್ಮಿಕ ಸಮನ್ವಯ ಸಾಧ್ಯವಾಯಿತು ಎಂಬುದು ಒಂದು ನಂಬಿಕೆ. ಸ್ಥಳೀಯರು ಇದನ್ನು ಪ್ರತಿಪಾದಿಸುತ್ತಾರೆ. ಎಂತಲೇ ರಾಮಾಯಣ ಕಾಲದಿಂದ ಇಂದಿನವರೆಗೂ ಹಂಪೆಯು ಪ್ರವಾಸಿಗರನ್ನು, ಯಾತ್ರಿಕರನ್ನು, ಭಕ್ತರನ್ನು ಆಕರ್ಷಿಸುತ್ತಲೇ ಇದೆ.

"ಶ್ರೀ ಪಂಪಾನಗರೀ ನಿವಾಸ ಜಯಂ' ಎಂದು ಹರಿಹರ ಕವಿ ಹಂಪೆಯನ್ನು ಕೊಂಡಾಡಿದ್ದಾನೆ. ಪಂಪಾಶತಕ, ರಕ್ಷಾಶತಕಗಳೆಂಬ ಕಾವ್ಯಗಳನ್ನು ರಚಿಸಿ ವಿರೂಪಾಕ್ಷನಲ್ಲಿ ತನ್ನ ಭಕ್ತಿಯನ್ನು ಪ್ರದರ್ಶಿಸಿದ್ದಾನೆ."[೧]

ಒಂದು ಕಾಲಕ್ಕೆ ವಿಜಯನಗರ ಸಾಮ್ರಾಜ್ಯವು (ಹಂಪೆ) ರಾಜಮಂದಿರಗಳು, ದೊಡ್ಡ ದೊಡ್ಡ ಉಪ್ಪರಿಗೆಗಳು, ಭವನಗಳು ಹಾಗೂ ಹಲವಾರು ಸೌಧಗಳಿಂದ ಮೆರೆಯುತ್ತಿತ್ತು. ಬಾಳೆ, ಹಲಸು, ಮಾವು, ತೆಂಗು ಇತ್ಯಾದಿ ವೃಕ್ಷಗಳಿಂದ ಬೀಗುತ್ತಿದ್ದಿತು. ಮಲ್ಲಿಗೆ, ಜಾಜಿ, ಸಂಪಿಗೆ, ಗುಲಾಬಿ ಹೀಗೆ ಹತ್ತು ಹಲವು ಜಾತಿಯ ಹೂಬಳ್ಳಿಗಳಿಂದಲೂ ಕೂಡಿದ್ದ ನೆಲೆವನೆಯಾಗಿತ್ತು. ಅಂತಹ ವೈಭವಯುತ ಸಾಮ್ರಾಜ್ಯ ಮುಂದಿನ ಕಾಲಕ್ಕೆ ಹಾವು, ಚೇಳು ಇತ್ಯಾದಿ ಹಲವು ಹತ್ತು ತೆರನಾದ ವಿಷಜಂತುಗಳ, ವಿಕೃತ ವಿಲಾಸಿಗಳ ಹಾಗೂ ಕಳ್ಳಕಾಕರ ನೆಲೆವೀಡಾಗಿ ಹಂಪೆ ತನ್ನ ಹಿಂದಿನ ವೈಭವವನ್ನು ಕಳೆದುಕೊಂಡು ಕೊಂಪೆಯಾಗಿ ಹೋಗಿದೆ. ತೆಂಗು-ಕಂಗು ಮರಗಳು ಒಲೆಗೆ ಉರುವಲಾಗುತ್ತಿವೆ. ವಿದೇಶಿಯರ ಆಕ್ರಮಣಕ್ಕೆ ಯಾವ ವಿಜಯನಗರ ಸಾಮ್ರಾಜ್ಯವು ಹೇಳಹೆಸರಿಲ್ಲದೆ ನೆಲ ಸಮವಾಯಿತೋ ಅದರ ಐತಿಹಾಸಿಕ ಕುರುಹುಗಳನ್ನು ಗುರುತಿಸುವುದು ನಾಡು ನುಡಿಯ ದೃಷ್ಟಿಯಿಂದ ಆಗಬೇಕಾದ ಅತ್ಯಗತ್ಯ ಕಾರ್ಯವೆನಿಸಿತು. 'ಗಂಗಾಸ್ನಾನಂ ತುಂಗಾಪಾನಂ' ಎಂಬುದಾಗಿ ಕರೆಸಿಕೊಂಡಿರುವ ಈ ನಾಡಿನ ಪವಿತ್ರ ತುಂಗಭದ್ರಾ ಜಲದಲ್ಲಿ ರಾಜರಮಣಿಯರು ಜಲ ಕ್ರೀಡೆಯಾಡುತ್ತಿದ್ದರು. ಆ ಪವಿತ್ರ ಜಲದಲ್ಲಿ ಕ್ರೂರ ವಿಷಜಂತುಗಳಾದ ಹಾವು, ಮೊಸಳೆಗಳು ವಾಸಿಸತೊಡಗಿದವು. ಇದು ಸುಮಾರು ಹದಿನಾರನೆಯ ಶತಮಾನದ ಹಂಪೆಯ ಚಿತ್ರಣ.

"ಹಂಪೆ ಎಂದು ಕರೆಸಿಕೊಂಡಿರುವ ಈ ಸುಕ್ಷೇತ್ರ ರಾಮಾಯಣದ ಕಾಲದಿಂದಲೂ ಪ್ರಸಿದ್ಧವಾದ ಸ್ಥಳ. ಅಲ್ಲಿ ಹೆಸರಿಸಿದ ಪಂಪಾಸರಸ್ಸೇ ಈ ತುಂಗಭದ್ರಾ ನದಿ. ರಾಮಚಂದ್ರ ಹನುಮಂತರ ಭೇಟಿಯಾದುದು, ವಾಲಿಯನ್ನು ಕೊಂದು, ಸುಗ್ರೀವನಿಗೆ ಪಟ್ಟ ಕಟ್ಟಿದುದು. ಇಲ್ಲಿಂದಲೇ ಶ್ರೀ ರಾಮಚಂದ್ರ ಹನುಮಂತನನ್ನು ತನ್ನ ದೂತನನ್ನಾಗಿ ಸೀತೆಯಲ್ಲಿಗೆ (ಲಂಕೆ) ಕಳುಹಿಸಿದ್ದು, ಹಂಪೆಯನ್ನು ಪುರಾಣ ಕಾವ್ಯಗಳಲ್ಲಿ ಕಿಷ್ಕಿಂದೆ ಎಂದು ಕರೆಯಲಾಗಿದೆ. ಕಿಷ್ಕಿಂದೆಯಿಂದ ಲಂಕೆಗೆ ಹೋಗಲು ಸೇತುವೆ ಕಟ್ಟಬೇಕಾಯಿತು. ಶ್ರೀರಾಮಚಂದ್ರ ಕಪಿಗಳಿಗೆ ಕಲ್ಲು ಬಂಡೆಗಳನ್ನು ತರಲು ಹೇಳಿದ ಅವರು ಬೇಕಾದ್ದಕ್ಕಿಂತ ಹೆಚ್ಚು ಕಲ್ಲುಗಳನ್ನು ತಂದರು, ಸೇತುವೆ ಮುಗಿಯಿತು. ಕಲ್ಲು ಸಾಕು ಎಂದು ನುಡಿದ ರಾಮ ಇದರಿಂದ ಬೇಸರಗೊಂಡ ವಾನರಸೇವೆ ಕಲ್ಲು ಬಂಡೆಗಳನ್ನು ಅಲ್ಲಿಯೇ ರಾಶಿರಾಶಿಯಾಗಿ ಚಲ್ಲಿ ಬಿಟ್ಟವು. ಅವೇ ಹಂಪೆಯಲ್ಲಿ ಗುಡ್ಡಗಳಾದವೆಂದು ಹಂಪೆಯಲ್ಲಿರುವ ಬಂಡೆಗಲ್ಲುಗಳ ಗುಡ್ಡ(Rocky Mountains)ಗಳನ್ನು ತೋರಿಸಿ ಹಂಪೆಯ ವಾಸಿಗಳು ಕಥೆ ಹೇಳುತ್ತಾರೆ."[೨]

ವಿಜಯನಗರದ ನೆಲೆಯನ್ನು ಕುರಿತು ಈ ಮೇಲಿನ ಸಂಗತಿಗಳು ಮಹತ್ವಪೂರ್ಣವಾಗಿವೆ. ತುಂಗಭದ್ರೆಯ ದಕ್ಷಿಣ ತೀರ ಪ್ರದೇಶದಲ್ಲಿ ಗುಡ್ಡ-ಬೆಟ್ಟಗಳ ಆವರಣದಲ್ಲಿ ವಿಜಯನಗರ ಸಾಮ್ರಾಜ್ಯವು ಮೈದಾಳಿತು. ಅನಂತರ ಅದು ಪ್ರಸಿದ್ಧವಾಗಿ ವಿಶ್ವವಿಖ್ಯಾತವಾಯಿತು. ನದಿಯ ಉತ್ತರ ದಡದಲ್ಲಿ ಆನೆಗೊಂದಿಯೆಂಬ ಪ್ರಾಚೀನ ನಗರವು ಅಸ್ತಿತ್ವದಲ್ಲಿತ್ತು. ಈ ಪಟ್ಟಣವು ಅನಂತರ ಹೊಸ ರಾಜಧಾನಿ ವಲಯದಲ್ಲಿ ಸಮಾವೇಶಗೊಂಡು ಅದರ ಉಪನಗರವಾಗಿ ಪರಿಣಮಿಸಿತು. ಮುಮ್ಮಡಿ ಬಲ್ಲಾಳನು ಶತ್ರುಗಳನ್ನು ತಡೆಗಟ್ಟಲು ಕೋಟೆ ಕೊತ್ತಳಗಳನ್ನು ಕಟ್ಟಿಸಿ ಆನೆಗೊಂದಿ ಪಟ್ಟಣದ ಭದ್ರತೆಯನ್ನು ಹೆಚ್ಚಿಸಿದ್ದನು.

ಆನೆಗೊಂದಿ (ಆನೆಗುಂದಿ)ಯ ಹತ್ತಿರದಲ್ಲಿರುವ ಒಂದು ಸರೋವರವನ್ನು ತೋರಿಸಿ ಇದೇ ಪಂಪಾ ಸರೋವರ; ಇಲ್ಲಿರುವ ಒಂದು ಗುಹೆಯಲ್ಲಿ ಪಂಪಾದೇವಿ ತಪಸ್ಸು ಮಾಡಿದುದು, ಅದರ ಪಕ್ಕವಿರುವ ಇನ್ನೊಂದು ಗುಹೆಯನ್ನು "ಶಬರಿ ಗುಹೆ" ಎಂದು ಕರೆಯುವರು. ಈ ಗುಹೆಯ ಹತ್ತಿರವೇ ಶಬರಿ ರಾಮಚಂದ್ರನ ಭೇಟಿ ಮಾಡಿ ಅವನಿಗೆ ಬೋರೆಹಣ್ಣುಗಳನ್ನು ಕೊಟ್ಟುದು ಶಬರಿ ಶ್ರೀ ರಾಮನಿಗಾಗಿ ಈ ಗುಹೆಯ ಹತ್ತಿರ ಕಾದುದರಿಂದ ಇದಕ್ಕೆ 'ಶಬರಿ ಗುಹೆ' ಎಂಬ ಹೆಸರು ಬಂದಿದೆ. ಇವೇ ಮೊದಲಾದ ಹತ್ತು ಹಲವು ಕಥೆಗಳು ಇಲ್ಲಿ ನಿತ್ಯ ಕೇಳಿ ಬರುತ್ತವೆ.

ಪಂಪಾದೇವಿಯ ತಪಸ್ಸನ್ನು ಮೆಚ್ಚಿ ಶಿವನು ಪ್ರತ್ಯಕ್ಷನಾಗಿ ಅವಳಿಗೆ ಹೇಮಕೂಟಕ್ಕೆ ಬರಲು ಆಮಂತ್ರಿಸಿ ಅಲ್ಲಿ ಅವಳನ್ನು ವರಿಸುವುದಾಗಿ ಹೇಳಿದನು. ಅದರಂತೆ ಪಾರ್ವತಿಯು ತುಂಗಭದ್ರೆಯ ದಕ್ಷಿಣ ತೀರದ ಹೇಮಕೂಟಕ್ಕೆ ಹೋಗಿ ಅಲ್ಲಿ ಶಿವನನ್ನು ವರಿಸಿ ಪಂಪಾ ವಿರೂಪಾಕ್ಷರೆಂಬ ಹೆಸರಿನಿಂದ ನೆಲಸಿದರು ಎಂದು ಮತ್ತೊಂದು ಕಥೆಯಿದೆ.

"ಇಂತಹ ಪಂಪಾ ವಿರೂಪಾಕ್ಷರ ನೆಲೆವೀಡಾದ ಹೇಮಕೂಟವನ್ನೊಳಗೊಂಡ ಹಂಪೆ ತುಂಗಭದ್ರಾ ನಡಿಯ ದಕ್ಷಿಣ ತೀರದಲ್ಲಿದೆ. ಹೊಸಪೇಟೆಯಿಂದ ಸು. ೧೪ ಕಿ.ಮೀ. ಅಂತರದಲ್ಲಿರುವ ಬಳ್ಳಾರಿ ಜಿಲ್ಲೆಯ ಚಿಕ್ಕ ಹಳ್ಳಿಯಾಗಿರುವ ಈ ಹಂಪೆ ಕರ್ನಾಟಕದ ಪ್ರಸಿದ್ಧ ಐತಿಹಾಸಿಕ ಸ್ಥಳಗಳಲ್ಲಿ ಒಂದು. ಇದು ಎಷ್ಟು ವಿಶಾಲವಾಗಿದೆ ಎಂದರೆ, ಜಗತ್ತಿನಲ್ಲಿ ಕಾಂಬೋಡಿಯಾದ ಅಂಕೋರವಾಟ ಬಿಟ್ಟರೆ, ಹಂಪೆಯೇ ಇಷ್ಟು ವಿಶಾಲವಾಗಿ ಹಾಗೂ ಇಷ್ಟೊಂದು ಗುಡಿಗಳು ಒಂದೇ ಸ್ಥಳದಲ್ಲಿ ಸೇರಿರುವ ಸ್ಥಳ."[೩] ಹಂಪೆ ನಿಜವಾಗಿಯೂ 'ಗುಡಿಗಳ ಸಂಗ್ರಹಾಲಯ' ಅದನ್ನು ಸಂಗ್ರಹಾಲಯದಂತೆಯೇ ಕಾಪಾಡಿಕೊಂಡು ಬರಬೇಕು, ಎಂದು ವಿದೇಶಿ ಪ್ರವಾಸಿಗರು ನುಡಿಯುತ್ತಾರೆ.

ಹಂಪೆಯ ಕೋಟೆ ಗೋಡೆಗಳನ್ನು ನೋಡುತ್ತ ಹೋದರೆ ಹಂಪೆಯನ್ನು ಅಳೆಯಲಾಗದು. ತುಂಗಭದ್ರೆಯ ಉತ್ತರ ತೀರದಲ್ಲಿರುವ ಆನೆಗೊಂದಿಯು ವಿಜಯನಗರದ ಅರಸರಿಗೆ ಎರಡನೇ ರಾಜಧಾನಿ ಹಂಪೆಯಿಂದ ೨೨ ಮೈಲು ದೂರದಲ್ಲಿ ಕಂಪಲಿ ಎಂಬ ಊರು ಇದೆ. ಇದೂ ಸಹ ಒಂದು ಕಾಲಕ್ಕೆ ವೈಭವಯುತ ರಾಜಧಾನಿಯಾಗಿಯೂ ಅನಂತರ ಕಲ್ಯಾಣಿ ಚಾಲುಕ್ಯರ ನೆಲೆವೀಡಾಗಿಯೂ ಮೆರೆದಿದೆ. ಹಂಪೆ, ಕಂಪಲಿ ಮತ್ತು ಆನೆಗುಂದಿಯ ಸುತ್ತಲೂ ಸೃಷ್ಟಿಯೇ ಗೋಡೆಯನ್ನು ಕಟ್ಟಿದೆಯೋ ಎಂಬಂತೆ ಇರುವ ಬಂಡೆಗಲ್ಲು ಗುಡ್ಡಗಳ ಸಾಲುಗಳು ವೈರಿಗಳಿಗೆ ನುಂಗಲಾರದ ತುತ್ತಾಗಿತ್ತು ಸೃಷ್ಟಿದೇವತೆಯ ವರಗೂಸು ಹಂಪೆ. ಇಲ್ಲಿಯ ನೆಲ-ಜಲ ಬಹಳ ಪವಿತ್ರವಾದುದು. ಬಂಗಾರ ಬಿತ್ತಿ ಬಂಗಾರ ಬೆಳೆದಂಥ ಪುಣ್ಯಭೂಮಿ ಚಿನ್ನದ ಬೆಳೆಯನ್ನು ಬೆಳೆಯುವಷ್ಟು ಸಮೃದ್ಧವಾದ ಭೂಮಿ ಎಂಬ ಉದ್ಗಾರವನ್ನು ಇಂದಿಗೂ ಕೆಲವು ಹಿರಿಯರ ಬಾಯಲ್ಲಿ ಕೇಳಬಹುದಾಗಿದೆ.

ವಿಜಯನಗರದಂತಹ ಶ್ರೇಷ್ಠ ಸಾಮ್ರಾಜ್ಯ ನೆಲಸಮವಾಗಿದ್ದರೂ ಈ ಪ್ರದೇಶಕ್ಕೆ ನೀರಿನ ಬರವಿಲ್ಲ. "ಬಳ್ಳಾರಿ ಜಿಲ್ಲೆಗೆ ದೇವರು ಮಳೆ ಕೊಡಲಿಲ್ಲ, ಆದರೆ ಹೊಳೆ" ಕೊಟ್ಟಿದ್ದಾನೆ ಎನ್ನುವ ಮಾತಿನಂತೆ ಕೆರೆ, ಕಾಲುವೆ, ನದಿ ನೀರುಗಳನ್ನು ಉಪಯೋಗಿಸಿಕೊಂಡು ವಿಜಯನಗರ ಸಾಮ್ರಾಜ್ಯದಲ್ಲಿ ಸಮೃದ್ಧ ಬೆಳೆಗಳನ್ನು ಬೆಳೆದು ಆರ್ಥಿಕವಾಗಿ ಸಮೃದ್ಧಿ ಸಾಧಿಸಿತು. ಮಾಧವಾಚಾರ್ಯರು ಅಥವಾ ವಿದ್ಯಾರಣ್ಯರು ತಪೋಬಲದಿಂದ ಚಿನ್ನದ ಮಳೆಯನ್ನೇ ಕರೆಯಿಸಿದರಂತೆ ಆ ಹಣವೇ ರಾಜಧಾನಿ ನಿರ್ಮಾಣಕ್ಕೆ ಸಹಕಾರಿಯಾಯಿತು ಎಂದು ಹೇಳುವುದು ಕೇವಲ ಹೇಳಿಕೆಯ ಮಾತು. ಈ ಎಲ್ಲಾ ಹೇಳಿಕೆಗಳಿಂದ ಅಂದಿನ ಆರ್ಥಿಕ ಸಂಪತ್ತು ಮತ್ತು ವೈಭವವನ್ನು ಸರಳವಾಗಿ ಊಹಿಸಬಹುದು. ಇದರಲ್ಲಿ ಪ್ರಮುಖವಾದ ವಿಷಯವೆಂದರೆ ನೀರಾವರಿ ಕಾರ್ಯಗಳು. ವಿಜಯನಗರ ಸಾಮ್ರಾಜ್ಯವು ಆಕಸ್ಮಿಕವಾಗಿ ಹುಟ್ಟಿದ ಸಾಮ್ರಾಜ್ಯವಲ್ಲ. ಇದು ಸತತ ಪರಿಶ್ರಮದಿಂದ ಹುಟ್ಟಿದರೂ ಆಕಸ್ಮಿಕವಾಗಿ ಅಳಿದು ಹೋಯಿತು. ಅದರ ಗತ ವೈಭವವನ್ನು ಹಂಪೆಯ ಸ್ಮಾರಕಗಳು ಇಂದಿಗೂ 'ಅಮರ'ವೆಂದು ಸಾರುವಂತಾಗಿದೆ.

ಮಧ್ಯಯುಗದಲ್ಲಿ ಕರ್ನಾಟಕಕ್ಕೆ ಕೋಡು ಮೂಡಿಸಿದ ಮಹಾಸಾಮ್ರಾಜ್ಯವೆಂದರೆ ವಿಜಯನಗರ ಇದು ದೇವರ ಸಾಮ್ರಾಜ್ಯ. ಇಲ್ಲಿಯ ದೈವವೇ ಪಂಪಾವಿರೂಪಾಕ್ಷ ಎಂಬುದು ತತ್ವಜ್ಞರ ಮಾತುಗಳಾಗಿವೆ. ಹಾಗೆಯೇ 'ಕಣ್ಣಿದ್ದರೆ ಕಾಶಿ ನೋಡು ಕಾಲಿದ್ದರೆ ಹಂಪಿ ನೋಡು' ಎಂಬ ಗಾದೆಯು ರೂಢಿಯಲ್ಲಿದೆ. ಹಂಪಿಯನ್ನು ಸರಿಯಾಗಿ ನೋಡಲು ಕಡಿಮೆ ಎಂದರೂ ಮೂರು ತಿಂಗಳ ಅವಧಿಯು ಬೇಕಾಗುತ್ತದೆ ಎಂಬ ಸಂಶೋಧಕರ ಮಾತುಗಳನ್ನು ಗಮನಿಸಿದರೆ ಹಂಪಿಯ ವಿಶಾಲವೆಷ್ಟು ಎಂಬ ಕಲ್ಪನೆ ಉಂಟಾಗಬಹುದು.

"ಇಂಥ ದೊಡ್ಡ ಸಾಮ್ರಾಜ್ಯಕ್ಕೆ ವಿದೇಶಗಳಿಂದ ಬಂದು ಹೋದವರ ಸಂಖ್ಯೆ ಅಪರಿಮಿತ. ಕ್ರಿ.ಶ. ೧೫ನೇ ಶತಮಾನದ ಪೂವಾರ್ಧದಿಂದ ಈ 'ಯಾತ್ರೆ' ಆರಂಭವಾಗಿ ಕಳೆದ ಶತಮಾನದವರೆಗೂ ವಿದೇಶಿ ಪ್ರವಾಸಿಗರು ಬಂದು ಹೋಗಿದ್ದಾರೆ. ಬಂದು ಹೋದವರಲ್ಲಿ ಕೆಲವರು 'ಪ್ರವಾಸ ಕಥನ'ಗಳನ್ನು ಬರೆದಿಟ್ಟಿದ್ದಾರೆ. ಇನ್ನೆಷ್ಟೋ ಪ್ರವಾಸ ಕಥನಗಳು ಕಾಲಗರ್ಭದಲ್ಲಿ ಹೂತು ಹೋಗಿವೆ. ಕೆಲವು ಪ್ರವಾಸಿಗರು ಬರೆದಿಟ್ಟುಕೊಂಡ ದಿನಚರಿಗಳು ಕನ್ನಡಕ್ಕೆ ಬರದೆ ಹಾಗೇ ಉಳಿದು ಬಿಟ್ಟಿವೆ. ಹೀಗೆ ಉಳಿದುಕೊಂಡ ಪ್ರವಾಸಿಗರ ಪ್ರವಾಸ ಕಥನಗಳಲ್ಲಿ 'ವಿಜಯನಗರ'ದ ಸಾಂಸ್ಕೃತಿಕ ಅನನ್ಯತೆಗಳು, ಅದರ ವೈಭವಗಳು, ಅಲ್ಲಿಯ ಸಾಮಾಜಿಕ ಸಂಗತಿಗಳು, ಅಲ್ಲಿಯ ಆಚರಣೆಗಳು ನಮ್ಮ ಕಣ್ಣ ಮುಂದೆ ಅಪೂರ್ವ ಸಂಗತಿಗಳನ್ನು ಪ್ರದರ್ಶಿಸುತ್ತವೆ. ಇವುಗಳ ಅಧ್ಯಯನ ಆಗಬೇಕಾಗಿದೆ. ಇಲ್ಲಿಗೆ ಬಂದು ಹೋದ ನಿಕೊಲೊ ಕೊಂತಿ, ಅಬ್ದುಲ್ ರಜಾಕ್, ದುಆರ್ತೆ ಬಾರ್ಬೊಸಾ, ಡೊಮಿಂಗೊ ಪಯಾಸ್, ಫರ್ನಾಡೊ ನೂನಿಜ್‌ರೇ ಮೊದಲಾದ ಅನೇಕ ಪ್ರಸಿದ್ಧ ಪ್ರವಾಸಿಗರ ಬರಹಗಳು ಇರುವಂತೆ; ಇಬ್-ನೆ-ಬತುತಾ ಅಥನೇಷಿಯಸ್, ನಿಕಿಟಿನ್, ಸೀಜರ್ ಫ್ರೆಡರಿಕ್, ಬ್ಯಾರಡಸ್, ಲೆಫ್ಟಿನೆಂಟ್ ಎಮಿಟ್ ಇವರಂಥ ಅಷ್ಟು ಪ್ರಸಿದ್ಧರಲ್ಲದ ಪ್ರವಾಸಿಗರೂ ಇದ್ದಾರೆ. ವಿಜಯನಗರದ ಸಾಂಸ್ಕೃತಿಕ ಚರಿತ್ರೆಯನ್ನು ಅಧ್ಯಯನ ಮಾಡುವವರೆಲ್ಲರಿಗೂ ಇವರೆಲ್ಲರೂ ನೀಡುವ ವಿವರಗಳು ಅಪೂರ್ವವಾಗಿವೆಯೆಂದೇ ನಮ್ಮ ನಂಬುಗೆ."[೪]

ವಿಜಯನಗರಕ್ಕೆ ಬಂದು ಹೋದ ಪ್ರವಾಸಿಗರಲ್ಲಿ ಪರ್ಶಿಯಾದ ಯಾತ್ರಿಕ ಅಬ್ದುಲ್ ರಜಾಕನದು ಮುಖ್ಯವಾದ ಹೆಸರು. ಈತನು ಕ್ರಿ.ಶ. ೧೪೪೨ರ ಸುಮಾರಿಗೆ ವಿಜಯನಗರಕ್ಕೆ ಬಂದಿದ್ದನು. ಆ ಕಾಲಕ್ಕೆ ವಿಜಯನಗರವು 'ಸುವರ್ಣ ವೈಭವ'ವನ್ನು ಕಂಡಿತ್ತು. ಅವನು ವಿಜಯನಗರದಲ್ಲಿ ನಡೆಯುತ್ತಿದ್ದ ಮಹಾನವಮಿ ಉತ್ಸವವನ್ನು ಕುರಿತು ವರ್ಣಿಸಿದ್ದಾನೆ.

"ಬಿಜನಗರ ಹೇಗಿದೆಯೆಂದರೆ ಕಣ್ಣು ಅಂಥ ಊರನ್ನು ಕಂಡಗಿಯದು ಇಡೀ ಪ್ರಪಂಚದಲ್ಲಿ ಅದಕ್ಕೆ ಸರಿಸಮಾನವಾದುದು ಎಲ್ಲಿಯಾದರೂ ಇದ್ದುದನ್ನು ಕಿವಿ ಕೇಳರಿಯದು. ಏಳು ದುರ್ಗಗಳು ಮತ್ತು ಅಷ್ಟೇ ಸಂಖ್ಯೆಯ ಗೋಡೆಗಳು ಒಂದನ್ನೊಂದು ಸುತ್ತುವರಿಯುವಂತೆ ಅದನ್ನು ಕಟ್ಟಲಾಗಿದೆ. ಒಂದನೆಯ ದುರ್ಗದ ಸುತ್ತ ಒಬ್ಬ ಮನುಷ್ಯನಷ್ಟು ಎತ್ತರವಿರುವ ಕಲ್ಲುಗಳಿವೆ. ಅವುಗಳ ಅರ್ಧ ಭಾಗ ಭೂಮಿಯೊಳಗೆ ಹೂಳಲಾಗಿದ್ದು ಉಳಿದರ್ಧ ಮೇಲೆ ಹಾಯ್ದಿವೆ. ಇವುಗಳನ್ನು ಒಂದಕ್ಕೊಂದು ಯಾವ ರೀತಿ

ನಿಲ್ಲಿಸಲಾಗಿದೆಯೆಂದರೆ ಯಾವ ಅಶ್ವಾರೋಹಿಯಾಗಲಿ, ಕಾಲಾಳಗಾಲಿ ಧೈರ್ಯವಾಗಿ ಇಲ್ಲವೆ ಸುಲಭವಾಗಿ ದುರ್ಗದ ಹತ್ತಿರಕ್ಕೆ ಬರುವಂತಿರಲಿಲ್ಲ. ಈ ಬಾಹ್ಯ ರಕ್ಷಣಾ ಕಟ್ಟಡವು ಕರಾವಳಿಯಿಂದ ಪ್ರವಾಸಿಗರಿಗೆಲ್ಲ ಮೊಟ್ಟಮೊದಲು ಕಣ್ಣಿಗೆ ಬೀಳುವಂಥಹದೆಂದು''[೪] ಪ್ಯಾಸ್ ಕೂಡ ವರ್ಣಿಸಿದ್ದಾನೆ. ಈ ಪ್ರವೇಶ ದ್ವಾರದಲ್ಲಿ ಸಾಗುವಳಿ ಮಾಡಿದ ಜಮೀನುಗಳು, ಮನೆಗಳು ಮತ್ತು ಕೋಟೆಯ ಎರಡನೆಯ ಸುತ್ತು ಇದೆ. ಆ ಪಟ್ಟಣ ಆಗ ಜನಸಾಂದ್ರವಾಗಿರದ್ದರಿಂದ ಅವನು ನಗರದ ಉತ್ತರ ಬದಿಯಲ್ಲಿರುವ ಮೂರನೆಯ ಸುತ್ತಿನ ಗೋಡೆ ದಾಟುವವರೆಗೂ ಅದೇ ಲಕ್ಷಣಗಳು ಅವನ ಕಣ್ಣಿಗೆ ಬೀಳುತ್ತವೆ. ಇಲ್ಲಿಂದ ಮನೆಗಳು ಜನ ನಿಬಿಡವಾಗುತ್ತ ಬಹುಶಃ ಇಕ್ಕೆಲಗಳಲ್ಲಿ ಅಂಗಡಿಗಳುಳ್ಳ ಅಲ್ಲಿಂದ ರಾಜಧಾನಿಗೆ ಸಾಗುವ ದೀರ್ಘ ಬೀದಿಯಾಗಿ ಮಾರ್ಪಡುತ್ತದೆ. ಗಟ್ಟಿಯಾದ ಹೆಬ್ಬಾಗಿಲಿರುವ ಸುತ್ತಿನ ಗೋಡೆ ಈಗಿನ 'ಮಲಪನಗುಡಿ' ಗ್ರಾಮವು ದಕ್ಷಿಣಕ್ಕೆ ಕಾಣುವುದು. ಐದನೆಯ ಸುತ್ತು ಈ ಗ್ರಾಮದ ಉತ್ತರಕ್ಕಿದೆ. ಅದರ ಗೋಡೆ ಬಹಳ ಭಗ್ನವಾಗಿದೆ. ಆರನೆಯ ಸುತ್ತನ್ನು ಕಮಲಾಪುರ ಕೆರೆಯ ದಕ್ಷಿಣಕ್ಕೆ ಒಯ್ಯುಲಾಗಿದೆ. ಏಳನೆಯ ಅಥವಾ ಒಳಗಿನ ಸುತ್ತು ಆ ಗ್ರಾಮದ ಉತ್ತರಕ್ಕೆ ತಕ್ಕಷ್ಟು ಉತ್ತಮ ಸ್ಥಿತಿಯಲ್ಲಿ ಇನ್ನೂ ಕಂಡುಬರುತ್ತಿರುವ ದೊಡ್ಡ ಗೋಡೆ, ರಜಾಕ್ ಮತ್ತು ಪ್ಯಾಸ್‌ರವರು ನೋಡಿರುವ ನೇರವಾಗಿ ನಿಂತಿರುವ ಕಲ್ಲುಗಳು ಇಂದು ಕಣ್ಮರೆಯಾಗಿವೆ.

ವಿಜಯನಗರದ ಬಾಹ್ಯ ವಿವರಗಳನ್ನು ನಮ್ಮ ಕಣ್ಣು ಮುಂದೆ ಚಿತ್ರಣ ಮೂಡುವಂತೆ ಅಬ್ದುಲ್‌ರಜಾಕ್ ವಿವರಿಸಬಲ್ಲ. ಅವನು ರಾಜನ ದಿವಾನಖಾನೆಗೆ ಎದುರಾಗಿದ್ದ ಫಿಲ್‌ಖಾನೆ ಅಥವಾ ಗಜಶಾಲೆಯನ್ನು ಕುರಿತು ಬರೆದ ವಿವರ ಇಂತಿದೆ.

ದಿವಾನಖಾನೆಗೆ ಎದುರಾಗಿ ಫಿಲ್‌ಖಾನೆ (ಗಜಶಾಲೆ) ಇದೆ. ರಾಜನಿಗೆ ಸೇರಿದ ಅನೇಕ ಆನೆಗಳು, ದೇಶದಲ್ಲೆಲ್ಲಾ ಬಹಳ ಭಾರಿಯಾದ ಆನೆಗಳು, ಅರಮನೆಯ ೧:೨ ಅಂದರೆ ಮೊದಲನೆಯ ಮತ್ತು ಎರಡನೆಯ ಕೋಟೆಗಳ ಮಧ್ಯೆ ಇರುವ ಉತ್ತರ ಪಶ್ಚಿಮ ಜಾಗದಲ್ಲಿರುತ್ತದೆ. ಈ ಆನೆಗಳು ಗರ್ಭವಾಗಿ ಮರಿ ಹಾಕುತ್ತವೆ. ರಾಜನ ಬಳಿ ಅತ್ಯಂತ ದೊಡ್ಡದಾದ ಬಿಳಿ ಆನೆಯಿದೆ. ಈ ಆನೆಯ ಮೈಮೇಲೆ ಅಲ್ಲಲ್ಲಿ ನೀರಿನ ಗುಳ್ಳೆಗಳಂತೆ ಬೂದುಬಣ್ಣದ ಮಚ್ಚೆಗಳಿವೆ. ಪ್ರತಿದಿನ ಆನೆಯನ್ನು ರಾಜನ ಮುಂದೆ ತೆಗೆದುಕೊಂಡು ಹೋಗುತ್ತಾರೆ. ಇದರ ದರ್ಶನ ತನಗೆ ಒಳ್ಳೆಯದೆಂದು ರಾಜನು ಭಾವಿಸುತ್ತಾನೆ.''[೬] ಈಗಲೂ ಸಹ ಇಂತಹ ನಂಬಿಕೆಗಳನ್ನು ಕಾಣಬಹುದು. ಯಾರ ಮುಖದರ್ಶನದಿಂದ ಒಳ್ಳೆಯದಾಗುವುದೊ ಅವರ ಮುಖವನ್ನು ಮಾತ್ರ ತಕ್ಷಣ ಎದ್ದು ನೋಡುತ್ತಾರೆ. ರಾಜನಿಗೆ ಆನೆಯ ದರುಶನ ಭಾಗ್ಯದಿಂದ ಒಳ್ಳೆಯದಾಗುತ್ತಿತ್ತು. ಇಂತಹ ಸಮಕಾಲೀನ ಆಧಾರಗಳಿಂದ ಮತ್ತು ಬರವಣಿಗೆಯಿಂದ, ಪ್ರವಾಸಿಗರ ದಿನಚರಿಯಿಂದ ಜಗತ್ಪ್ರಸಿದ್ಧವಾಗಿ ಮೆರೆದ ಮಹಾಸಾಮ್ರಾಜ್ಯ ಆರ್ಥಿಕವಾಗಿಯೂ ಸದೃಢವಾಗಿತ್ತು. ವಿಜಯನಗರದ ಅರಸರು ದೇಶದ ಆರ್ಥಿಕ ವಿಕಾಸಕ್ಕೆ ವ್ಯವಸಾಯ ಅನಿವಾರ್ಯ ಎಂಬ ಸಂಗತಿಯನ್ನು

ಅರಿತವರಾಗಿದ್ದರು. ಭಾರತದ ಬಹು ಜನರ ವೃತ್ತಿ ಇಂದಿಗೂ ವ್ಯವಸಾಯವೇ ಆಗಿರುವುದರಿಂದ ಪಶ್ಚಿಮ ಘಟ್ಟಗಳಲ್ಲಿ ಸುರಿದ ಮಳೆ ನೀರು ಪೂರ್ವಕ್ಕೆ ಹರಿದು ದಕ್ಷಿಣ ಸಮುದ್ರಕ್ಕೆ ಸೇರುತ್ತಿದ್ದ ನದಿಗಳ ನೀರೇ ದಕ್ಷಿಣ ಭಾರತದ ಜನರಿಗೆ ಅಪಾರ ನೀರಿನ ಸಂಪನ್ಮೂಲವಾಗಿತ್ತು. ನದಿ, ಕಾಲುವೆ, ಬಾವಿ ಹಾಗೂ ಅಂತರ್ಜಲಗಳಿಂದ ನೀರಾವರಿ ಕಾಮಗಾರಿಗಳನ್ನು ಮಾಡಿ ವಿಜಯನಗರದ ಆರ್ಥಿಕ ಸಂಪತ್ತು ಹೆಚ್ಚಿತು. ಬಾರ್ಬೊಸಾ ಎಂಬ ವಿದೇಶಿ ಯಾತ್ರಿಕನು ವರ್ಣಿಸಿದಂತೆ "ವಾಣಿಜ್ಯ ಬೀದಿಗಳಲ್ಲಿ ವಜ್ರ ವೈಢೂರ್ಯ, ಹವಳ, ಮುತ್ತುಗಳ, ರಾಶಿಯನ್ನೆ ಹಾಕಿ ಮಾರಾಟ ಮಾಡುತ್ತಿದ್ದರಂತೆ".[೭] ಈ ಸಂಪತ್ತೆ ವಿದೇಶಿಯರ ಕಣ್ಣು ಕುಕ್ಕಲು ಅವಕಾಶವಾಯಿತು. ಗಳಗನಾಥರು ತಾವು ಭಾಷಾಂತರಿಸಿದ 'ಕನ್ನಡಿಗರ ಕರ್ಮಕತೆ'ಯಲ್ಲಿ ವಿಜಯನಗರ ಸಾಮ್ರಾಜ್ಯದ ವೈಭವ ಕೃಷ್ಣದೇವರಾಯನ ಕಾಲಕ್ಕೆ ಹಾಗೂ ರಾಮರಾಯನ ಕಾಲಕ್ಕೂ ಮುಂದುವರಿದುದು. ರಾಮರಾಯನ ಭೀಕರ ಕೊಲೆಯ ನಂತರ ಇಡೀ ವಿಜಯನಗರ ಸಂಪತ್ತನ್ನು ಸತತ ಸುಲಿಗೆಯ ಮೂಲಕ ಸರ್ವನಾಶ ಮಾಡಿದರು. ದೇವಸ್ಥಾನಗಳನ್ನು ಕೆಡವಿದರು. ನೂರಾರು ಮೂರ್ತಿಗಳನ್ನು ಒಡೆದರು. ಕೈಗೆ ಸಿಕ್ಕವರನ್ನು ಕೊಂದು ಹಾಕಿದರು. ಸಭಾಮಂಟಪ ನೆಲಸಮ ಮಾಡಿದರು. ಈ ಸುಲಿಗೆಯಿಂದ ಲೆಕ್ಕವಿಲ್ಲದಷ್ಟು ಸಂಪತ್ತು ಸುಲಿಯಲ್ಪಟ್ಟಿತು. ಆ ರತ್ನರಾಶಿಯಲ್ಲಿ ಸಿಕ್ಕ "ಒಂದು ರತ್ನವು ಒಂದು ಕೋಳಿ ಮೊಟ್ಟೆಯಷ್ಟು ಇತ್ತು. ಈ ರತ್ನವನ್ನು ರಾಮರಾಜನು ತನ್ನ ಕುದರೆಯ ಶಿರೋಭೂಷಣದಲ್ಲಿ ಕೂಡ್ರಿಸಿದ್ದನು. ಈ ರತ್ನವು ಮುಂದೆ ಆದಿಲ್‌ಶಾಹನ ವಶವಾಯಿತು."[೮] ಕುದುರೆಯ ಶಿರದ ಮೇಲೆಯೇ ಇಂಥ ದೊಡ್ಡ ರತ್ನವಿದ್ದ ಬಳಿಕ ಅರಮನೆಯಲ್ಲಿ ಹಾಗೂ ರಾಜರಾಣಿಯರ ರಾಜಗೃಹದಲ್ಲಿ ಎಷ್ಟು ಸಂಪತ್ತು ಕೂಡಿ ಬಿದ್ದಿರಬೇಕು ಎನ್ನುವುದನ್ನು ಇಂದಿನವರಾದ ನಮಗೆ ಕಲ್ಪಿಸುವುದು ಅಸಾಧ್ಯವಾದುದು.

ಈ ಚರಿತ್ರಾರ್ಹ ಸಾಮ್ರಾಜ್ಯದ ವಿವರಗಳು ಕೇವಲ ಶಾಸನಗಳಲ್ಲಿ ಸಮಕಾಲೀನ ಸಾಹಿತ್ಯ ಹಾಗೂ ವಿದೇಶಿ ಯಾತ್ರಿಕರ ಬರವಣಿಗೆಯಲ್ಲಿ ಕಾಣಬಹುದಿತ್ತು. ೧೫೬೫ರಲ್ಲಿ ಸಾಮ್ರಾಜ್ಯ ಪತನವಾಯಿತು. ಅಲ್ಲಿಂದ ಆ ಸಾಮ್ರಾಜ್ಯ ಅಜ್ಞಾತ ಕೂಪದಲ್ಲಿ ಉಳಿಯಿತು. ಯಾವುದೇ ಶೋಧ ನಡೆಯದೆ ಸುಮಾರು ನಾಲ್ಕು ಶತಮಾನಗಳ ಕಾಲದವರೆಗೂ ಜನರಿಂದ ಅದು ನಿರ್ಲಕ್ಷಕ್ಕೊಳಗಾಯಿತು. ೧೯೦೦ರಲ್ಲಿ ಸಿವೆಲ್‌ರ 'ದಿ ಫರ್‌ಗಾಟನ್ ಎಂಪೈರ್' ಕೃತಿಯನ್ನು, ಆಪ್ಟೆಯವರು 'ವಿಜಯನಗರ ಚಾ ವಿನಾಶಕಾಲ (ವಜ್ರಾಘಾತ)' ಎಂಬ ಕೃತಿಯನ್ನು ಸೂರ್ಯನಾರಾಯಣರು 'ದಿ ನೆವರ್ ಫರ್‌ಗಾಟನ್ ಎಂಪೈರ್' ಕೃತಿಯನ್ನು ರಚಿಸುವುದರ ಮೂಲಕ ಜನಜಾಗ್ರುತಿಯನ್ನುಂಟು ಮಾಡಿದರು. ಎರಡು ಇಂಗ್ಲೀಷ್ ಇತಿಹಾಸ ಕೃತಿಗಳಾದರೆ ಒಂದು ಮರಾಠಿ ಭಾಷೆಯಲ್ಲಿರುವ ಕಾದಂಬರಿ. ಈ ಕೃತಿಗಳನ್ನು ಅನುವಾದ ಮಾಡಿದವರು ಕನ್ನಡಿಗರಾದ ಗಳಗನಾಥರು, ಸದಾನಂದ ಕನವಳ್ಳಿಯವರು ಮತ್ತು ಬಾಲಸುಬ್ರಹ್ಮಣ್ಯ ಇವರು. ಬೇರೆ ಭಾಷೆಯ ಕೃತಿಗಳನ್ನು ಕನ್ನಡಕ್ಕೆ ತರುವುದು ಅವರ ಒತ್ತಾಸೆಯಾಗಿತ್ತು. ಏಕೆಂದರೆ ಗಳಗನಾಥರ ಕಾದಂಬರಿಗಳ ವಸ್ತು ಸಾಮಾನ್ಯವಾಗಿ ಇತಿಹಾಸ, ದಾಖಲಾತ್ಮಕ ಇತಿಹಾಸವನ್ನು ಕಲಾತ್ಮಕ ಕಾದಂಬರಿಯನ್ನಾಗಿಸುವ ಕೌಶಲ

ಅವರ ಕೈವಶವಾಗಿತ್ತು. ೨೦ನೇ ಶತಮಾನದ ಭಾರತದಲ್ಲಿ ರಾಷ್ಟ್ರೀಯ ಪ್ರಜ್ಞೆ ಜಾಗೃತವಾಗುತ್ತಿದ್ದ ಸಂದರ್ಭ ದೇಶ ಸೇವಕರಂತೆ ಸಾಹಿತಿಗಳೂ ಈ ಪ್ರಜ್ಞೆಯ ಉದ್ದೀಪನೆಗಾಗಿ ದುಡಿದರು. ಈ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಬ್ರಿಟಿಷರ ವಿರುದ್ಧ ನೇರವಾಗಿ ದೇಶ ಸೇವಕರು ಪ್ರತಿಭಟಿಸಿದರೆ, ಬರಹಗಾರರು ಈ ಕಾರ್ಯವನ್ನು ಪರ್ಯಾಯವಾಗಿ ಮೊದಲಿನ ಪರಕೀಯ ದಬ್ಬಾಳಿಕೆಯನ್ನು ಗಳಗನಾಥರು ಕಾದಂಬರಿ ಮಾಧ್ಯಮದ ಮೂಲಕ ಕನವಳ್ಳಿ ಮತ್ತು ಬಾಲಸುಬ್ರಹ್ಮಣ್ಯ ಅವರು ಇತಿಹಾಸ ಕೃತಿಯ ಮೂಲಕ ಭಾಷಾಂತರಿಸಿ ರಾಷ್ಟ್ರೀಯ ಪ್ರಜ್ಞೆಯನ್ನು ಮೆರೆದರು. ಇವರಿಗೆ ರಾಜಕೀಯ, ಸಾಮಾಜಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಒತ್ತಾಸೆಗಳಿದ್ದವು. ಆದ್ದರಿಂದಲೇ ಒಂದು ಸಂಸ್ಕೃತಿಯ ಸಾಹಿತ್ಯ ನಮ್ಮ ಭಾಷೆಗೆ ಅತ್ಯಗತ್ಯವಾಗಿ ಬರಲು ಸಾಧ್ಯವಾಯಿತು. ನಂತರ ಈ ಭಾಷಾಂತರವು ಭಾವಾಂತರಕ್ಕೆ ಹಾಗೂ ಸೃಜನ ಸಾಹಿತ್ಯಕ್ಕೆ (ಸ್ವತಂತ್ರ ಸಾಹಿತ್ಯ) ದಾರಿ ಮಾಡಿಕೊಟ್ಟಿತು. ಇದಕ್ಕೆ ಅನುಗುಣವಾಗಿ ನವೋದಯ ಆರಂಭದ ಕನ್ನಡದ ಭಾವಗೀತೆ ಮತ್ತು ನಾಟಕಗಳು ಅನುವಾದದ ದಾರಿ ಹಿಡಿದೇ ಕನ್ನಡದೊಳಗೆ ಬಂದವು. ಗಳಗನಾಥ ಅನುವಾದಿತ ಕಾದಂಬರಿಗಳು ಸಮಕಾಲೀನ ವಾತಾವರಣದಲ್ಲಿ ಕನ್ನಡಿಗರನ್ನು ಆಯಸ್ಕಾಂತದಂತೆ ಸೆಳೆದವು. ಇದರಲ್ಲಿ ಕನ್ನಡಿಗರ ಕರ್ಮಕತೆಯು ಇತಿಹಾಸ ಪ್ರಸಿದ್ಧ ವಿಜಯನಗರ ಸಾಮ್ರಾಜ್ಯವೊಂದರ ಘಟನಾವಳಿಗಳನ್ನು ಒಳಗೊಂಡುದರಿಂದ ಜನರಿಗೆ ಹೆಚ್ಚು ಪ್ರಿಯವಾಯಿತು.

ಈ ಅನುವಾದ ಕಾದಂಬರಿ ಹಾಗೂ ಇತಿಹಾಸ ಕೃತಿಗಳಲ್ಲಿ ವರ್ಣಿಸಲಾದ ವಿಜಯನಗರ ಸಾಮ್ರಾಜ್ಯವು ಅಳಿದು ಹೋಗಿ ಕಾಲನ ತುಳಿತಕ್ಕೆ ಒಳಗಾಗಿದೆ. "ತೇರು ಬೀದಿಯ ನಾಲ್ಕು ಕಡೆಯ ದೇವಸ್ಥಾನಗಳು ಭೂಮಿಗತವಾಗಿವೆ. ಅಲ್ಲಿನ ಮೂರ್ತಿಗಳ ಕೈಯೊಂದು ಕಡೆ, ಕಾಲೊಂದು ಕಡೆ, ರುಂಡ ಮುಂಡಗಳು ಬೇರೊಂದು ಕಡೆಗಿವೆ. ಪಾಳುದೇವತೆ ಎಲ್ಲೆಲ್ಲಿಯು ತನ್ನ ವಿಕಟವಾದ ಅಟ್ಟಹಾಸದಿಂದ ತನ್ನ ಪ್ರಭಾವವೆಂಥಹದೆಂಬುದನ್ನು ಬಿರ್‍ರನೆ ಬೀಸುವ ಉರಿಗಾಳಿಗೆ ಚೀರಿ ಹೇಳಿ ಆ ಪ್ರದೇಶವನ್ನು ಸ್ಮಶಾನವನ್ನಾಗಿ ಮಾಡಿದೆ. ಸ್ಮಶಾನವಲ್ಲದೆ ಮತ್ತೇನು? ರಕ್ತ, ಮಾಂಸ, ರಸ, ರಾಗ, ಬಣ್ಣ ಕಾಂತಿಗಳಿಂದ ಪರಿಪುಷ್ಟರಾದ ಯುವಕ, ಯುವತಿಯರು ನಸುನಗುತ ಸರಸವಾಡುತ್ತಿದ್ದ ಸುಖ ಭೂಮಿಯಲ್ಲಿ ಈಗ ವಿಷಧರ ಸರ್ಪಗಳು, ಮುಳ್ಳು ಹಂದಿಗಳು, ಕಳ್ಳಕಾಕರು; ಎಲ್ಲಿ ಹೂದೋಟಗಳ ಪರಿಮಳವನ್ನು ಹೊತ್ತುಕೊಂಡು ತಂಗಾಳಿ ಬೀಸುತ್ತಿತ್ತೊ ಅಲ್ಲಿ ಈಗ ದಾರುಣ ಉರಿಗಾಳಿ. ಪ್ರಪಂಚದ ಚಕ್ರಾಧಿಪತಿಗಳ ಸಂದಣಿಯಲ್ಲಿ ಅರ್ಹರಾದ ಸಾಮ್ರಾಟರು ಆಳುತ್ತಿದ್ದ ಈ ನೆಲದಲ್ಲಿ ಮುಳ್ಳು ಪೊದೆ; ಅವರ ದರ್ಪ ಪೌರುಷಗಳು ಪ್ರತಿಧ್ವನಿತವಾಗುತ್ತಿದ್ದ ಅರಮನೆಗಳಲ್ಲಿ ನರಿ, ಗೂಗೆಗಳ ಕರ್ಕಶ ಧ್ವನಿ; ಅಪ್ರತಿಮ ಸೌಂದರ್ಯ ಕಾಂತಿಯಿಂದ ಬೆಳಗುತ್ತಿದ್ದ ಮಂಟಪ, ಗುಡಿ, ಪ್ರಾಸಾದ, ಅರಮನೆ ಇವುಗಳಿದ್ದ ಕಡೆ ಪದಚ್ಯುತವಾದ ದೇವತಾ ವಿಗ್ರಹಗಳು ಒಡೆದು ಬಿದ್ದಿರುವ ಇನ್ನೂ ಬೀಳುತ್ತಲೇ ಇರುವ ಕಟ್ಟಡಗಳು ತಮಗೆ ಬಂದಿರುವ ದುರ್ಗತಿಯನ್ನು ನೋಡಿ ಜನರು ನೀತಿಗಗೊಳ್ಳಲೆಂದು ರಾಶಿರಾಶಿಯಾಗಿ ಬಿದ್ದಿವೆ."[1]

ವಿಜಯನಗರ ಧ್ವಂಸವಾದುದು ಹಾಗಿರಲಿ ರಾಜರ ಇಂದ್ರ ಸದೃಶವಾದ ವೈಭವಗಳು, ಅವರ ಉನ್ನತ ವಿಚಾರಗಳು, ಅಭಿಲಾಷೆಗಳು, ಕಾರ್ಯಗಳ ಮೂಲಕ ಅಮರತ್ವವನ್ನು ಪಡೆಯಬೇಕೆನ್ನುವ ಅವರ ಅದ್ಭುತ ಪ್ರಯತ್ನಗಳು ನಾಶ ಪಡೆದು ವೈಭವ ರಂಗವೇ ಮಹಾ ಸ್ಮಶಾನವಾಗಿದೆ.

ಈ ಮಹಾಸಾಮ್ರಾಜ್ಯದ ಬಗ್ಗೆ ಯುನೆಸ್ಕೊ ಮತ್ತು ವರ್ಲ್ಡ್ ಹೆರಿಟೇಜ್‌ಗಳು ಸಹ ಆಸಕ್ತಿಯನ್ನು ವಹಿಸುತ್ತಿವೆ. ಡಾ.ಎಂ. ಚಿದಾನಂದಮೂರ್ತಿಯವರು ಈ ಸಾಮ್ರಾಜ್ಯವನ್ನು ಕುರಿತಂತೆ ಗಂಭೀರ ಅಧ್ಯಯನ ಕೈಕೊಂಡು ಹೊಸ ಹೊಸ ಸಂಶೋಧನೆಗಳ ಮೂಲಕ ಅಮೂಲ್ಯ ಸಂಗತಿಗಳನ್ನು ಗುರುತಿಸಿದ್ದಾರೆ.

"ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಹಂಪಿಯನ್ನು ಜನವಸತಿಯಿಂದ ತೆರವುಗೊಳಿಸಬೇಕೆಂಬ ಅವಾಸ್ತವಿಕ ಪ್ರಸ್ತಾಪವನ್ನು ಕೇಂದ್ರ ಪ್ರವಾಸೋದ್ಯಮ ಇಲಾಖೆ ಮಾಡುತ್ತಿದೆ."[೧೦] ಇದಕ್ಕೆ ರಾಜ್ಯ ಸರ್ಕಾರ ಸಹಕಾರ ನೀಡುತ್ತಿಲ್ಲ. ಕಾರಣ ಹಂಪಿಯಲ್ಲಿನ ಜನವಸತಿ ಕೂಡಾ ಅದರ ಸಂಸ್ಕೃತಿಯ ಭಾಗ ಅದರಿಂದ ಪ್ರವಾಸೋದ್ಯಮ ಅಭಿವೃದ್ಧಿಗೆ ಅಡ್ಡಿಯಾಗುತ್ತದೆ ಎನ್ನುವುದು ಸರಿಯಲ್ಲ. ಅಗತ್ಯ ಸಂದರ್ಭದಲ್ಲಿ ಹಂಪೆಯ ಜಮೀನನ್ನು ಪುರಾತತ್ವ ಇಲಾಖೆಗೆ ಸರಕಾರ ನೀಡಿದೆ. ಈ ರೀತಿ ನೀಡಿರುವ ೨೬೩ ಎಕರೆ ಜಮೀನಿನಲ್ಲಿ ಉತ್ಖನನ ಕಾರ್ಯ ನಡೆಯುತ್ತಿದೆ. ಆದರೆ ಹಂಪೆಯನ್ನು ಜನವಸತಿಯಿಂದ ಮುಕ್ತಗೊಳಿಸಿದರೆ ಕೃಷಿ ಮತ್ತು ಗುಡಿ ಕೈಗಾರಿಕೆ ಮಾಡಿಕೊಂಡು ವಾಸಿಸುತ್ತಿರುವ ಜನರೆಲ್ಲ ಬೀದಿ ಪಾಲಾಗುವರು.

ಹಂಪಿಯಲ್ಲಿ ಮೂಲ ಸೌಕರ್ಯ ಕಲ್ಪಿಸುವ ರಾಜ್ಯ ಸರ್ಕಾರದ ಯೋಜನೆಗಳು ಕೇಂದ್ರ ಸರ್ಕಾರದ ಮಟ್ಟದಲ್ಲಿ ನೆನೆಗುದಿಗೆ ಬಿದ್ದಿವೆ. ಜಗಮೋಹನ್‌ರವರು ಪ್ರವಾಸೋದ್ಯಮ ಸಚಿವರಾಗಿದ್ದಾಗ ೪೦೦ ಕೋಟಿ ರೂಪಾಯಿ ಅಂದಾಜು ವೆಚ್ಚದ ಯೋಜನೆಯೊಂದನ್ನು ರೂಪಿಸಲಾಗಿತ್ತು. ಪ್ರತ್ಯೇಕವಾದ ರಥೋತ್ಸವ ಬೀದಿಯನ್ನು ನಿರ್ಮಿಸಿ ವಿರೂಪಾಕ್ಷೇಶ್ವರ ದೇವಾಲಯದ ಮುಂದಿನ ರಥ ಬೀದಿಯಲ್ಲಿನ ಅಂಗಡಿಗಳನ್ನೆಲ್ಲಾ ಅಲ್ಲಿಗೆ ಸ್ಥಳಾಂತರಿಸುವುದು ಕೂಡಾ ಆ ಪ್ರಮುಖ ಯೋಜನೆಯ ಭಾಗವಾಗಿತ್ತು. ಆದರೆ ಇಂದಿನ ಕೇಂದ್ರ ಸರ್ಕಾರದ ಪ್ರವಾಸೋದ್ಯಮ ಸಚಿವೆ ಅಂಬಿಕಾಸೋನಿ ಹಂಪಿಯ ನಿವಾಸಿಗಳಿಗೆ ತೆರವುಗೊಳಿಸಲು ಸರ್ಕಾರದ ಮೇಲೆ ಪದೇ ಪದೇ ಒತ್ತಡ ತರುತ್ತಿದ್ದಾರೆ.

"೧೯೮೫ ರಿಂದ ಹಂಪೆಯಲ್ಲಿ ಉತ್ಖನನ ಹಾಗೂ ಸಂಶೋಧನೆ ಹಿಂದಿಗಿಂತ ಸ್ವಲ್ಪ ಚುರುಕಾಗಿ ನಡೆಯಲಾರಂಭಿಸಿದೆ. ಭಾರತ ಸರ್ವೇಕ್ಷಣ ಇಲಾಖೆ (Archaeological Servey of India) ಮತ್ತು ಕರ್ನಾಟಕ ಪ್ರಾಚ್ಯವಸ್ತು ಇಲಾಖೆಗಳು ಒಟ್ಟಾಗಿ ನಡೆಸಿರುವ ಉತ್ಖನನ ಫಲವಾಗಿ ಕುತೂಹಲಕರ ಅಂಶಗಳು ಬೆಳಕಿಗೆ ಬರಲಾರಂಭಿಸಿವೆ."[೧೧] ಸಂಶೋಧನೆಯಿಂದ ಬೆಳಕಿಗೆ ಬಂದಿರುವ ವಿಜಯನಗರ ಕಾಲದ ವಾಸ್ತುಶಿಲ್ಪ, ನಗರ ಯೋಜನೆ, ಕೋಟೆ ನಿರ್ಮಾಣ, ಒಳಚರಂಡಿ ವ್ಯವಸ್ಥೆ, ಕುಡಿಯುವ ನೀರಿನ ಪೂರೈಕೆ, ನೀರಾವರಿ ವ್ಯವಸ್ಥೆ ಮೊದಲಾದ ಸೌಲಭ್ಯಗಳು ಎಲ್ಲರಿಗೂ ಕುತೂಹಲ ಹುಟ್ಟಿಸುತ್ತವೆ.

ಪ್ರವಾಸಿಗರಾದ ಅಬ್ದುಲ್‌ರಜಾಕ್, ನೂನಿಜ್, ಪಯಾಸ್ ಅವರ ದಾಖಲೆಗಳನ್ನು ಆಧಾರವಾಗಿಟ್ಟುಕೊಂಡು ಭೂಶೋಧನೆಗಳನ್ನು ನಡೆಸಲಾಗುತ್ತಿದೆ. ಸಮಕಾಲೀನರಾದ ಇವರು ಇತಿಹಾಸವನ್ನು ರಚಿಸದೆ ಪ್ರವಾಸ ಕಥನ, ದಿನಚರಿ ಇತ್ಯಾದಿಗಳನ್ನು ರಚಿಸಿದ್ದರಿಂದ ವಿಜಯನಗರ ಸಾಮ್ರಾಜ್ಯದ ಇತಿಹಾಸದ ಬಗ್ಗೆ ತಿಳಿಯದಾಯಿತು.

ಇಂದು ಹಂಪಿಯ ಸುತ್ತಮುತ್ತಲು ವಾಸಿಸುತ್ತಿರುವ ಬಡಜನತೆಯ ಸ್ಥಿತಿ ಹೇಗಿದೆ ಎಂದರೆ, ಪ್ರವಾಸದ ಕಾರಣದಿಂದಾಗಿ ಇಲ್ಲಿಗೆ ಭೇಟಿ ನೀಡುವ ಕೆಂಪು ಮುಸುಡಿಗಳಿಗೆ ಹಂಪಿಯ ಮುಗ್ಧ ಜನರು ಬಲಿಯಾಗುವುದನ್ನು ಕಾಣಬಹುದು. ಹಂಪಿಯ ಪ್ರತಿಯೊಬ್ಬ ವ್ಯಕ್ತಿಯ ಮೇಲೂ ಇಂಗ್ಲಿಷ್ ಭಾಷೆ ಪ್ರಭಾವ ಬೀರಿದ್ದು, ವಿದೇಶಿಯರ ಸತತ ಸಂಪರ್ಕದಿಂದ ಹಂಪಿಯ ಕನ್ನಡಿಗರು ಪಾಶ್ಚಿಮಾತ್ಯ ಪ್ರವಾಸಿಗರೊಂದಿಗೆ ಹರಕು ಮುರಕು ಇಂಗ್ಲೀಷ್‌ನಲ್ಲಿ ಮಾತಾಡಿ ಅವರ ಮೋಸಕ್ಕೆ ಬಲಿಯಾಗುತ್ತಿದ್ದಾರೆ. ವಿಪರ್ಯಾಸವೇನೆಂದರೆ ಭಾರತದಿಂದ ವಿದೇಶಿಯರನ್ನು ಓಡಿಸಿದರೂ ಹಂಪಿ ನೋಡುವ ನೆವದಿಂದ ಅವರು ಕರ್ನಾಟಕಕ್ಕೆ ಬರುತ್ತಲೇ ಇದ್ದಾರೆ. ಇಲ್ಲಿಯ ಜನರು ಅವರನ್ನು ಸುಲಭವಾಗಿ ನಂಬಿ ಸಹಾಯ ಮಾಡುತ್ತಲೇ ಇದ್ದಾರೆ. ಈ ಸಹಾಯದ ಫಲವಾಗಿ ಇಲ್ಲಿಯ ಭೂಮಿಯನ್ನು ಅವರು ತೆಗೆದುಕೊಂಡು ಭೂಮಾಲೀಕರಾಗುತ್ತಿದ್ದಾರೆ.

"ಹಂಪಿಯನ್ನು ಭೋಗ ವಸ್ತುಗಳ ಕೇಂದ್ರವಾಗಿಸಿಕೊಂಡು ಕಾಲಹರಣ ಮಾಡುವುದು ಕ್ರಿಸ್‌ಮಸ್ ಹಬ್ಬವನ್ನು ನೆಪಮಾಡಿಕೊಂಡು ಡಿಸೆಂಬರ್ ತಿಂಗಳಲ್ಲಿ ಗೋವಾದಲ್ಲಿ ನೆಲಸಿ ಗೋವಾದಿಂದ ನೇರವಾಗಿ ವಿಜಯನಗರವನ್ನು ವೀಕ್ಷಿಸಲು ಹಂಪಿಗೆ ಬರುತ್ತಾರೆ. ಹೀಗೆ ಬರುವ ವಿದೇಶಿಯರಲ್ಲಿ ಹೆಚ್ಚು ಜನರು ಹಂಪಿಯಲ್ಲಿ ಮಾದಕ ವಸ್ತುಗಳು ಸಿಗುತ್ತವೆ ಎಂಬ ಕಾರಣದಿಂದಲೇ ಬರುತ್ತಾರೆ. ಇವುಗಳನ್ನು ಮಾರಾಟ ಮಾಡುವವರು ಬಡವರೇ ಆಗಿರುತ್ತಾರೆ. ವೇಷಗಾರರು, ಋಷಿಗಳು, ಸಣ್ಣಪುಟ್ಟ ವ್ಯಾಪಾರಿಗಳಿಗೆ ಹಣಕೊಟ್ಟು ವಿದೇಶಿಯರು ಗುಪ್ತವಾಗಿ ಗಾಂಜಾ ಹಾಗೂ ಅಫೀಮಿನಂತಹ ವಸ್ತುಗಳನ್ನು ತರಿಸಿಕೊಂಡು ಸೇವಿಸಿ ಕುಣಿದು ಕುಪ್ಪಳಿಸುತ್ತಾರೆ ಹಾಗೂ ಈ ಮಾದಕ ವಸ್ತುಗಳು ಗೋವಾದಿಂದ ನೇರವಾಗಿ ಹಂಪಿಗೆ ರವಾನೆಯಾಗುತ್ತಿವೆ. ಈ ಎಲ್ಲ ವಿದ್ಯಾಮಾನಗಳನ್ನು ಗಮನಿಸಿದಾಗ ವಿಜಯನಗರದ ಸಾಂಸ್ಕೃತಿಕ ಪರಂಪರೆ ಇಂದು ಬರುತ್ತಿರುವ ವಿದೇಶಿ ಪ್ರವಾಸಿಗರಿಂದ ನಾಶವಾಗುತ್ತಿದೆ. ಹಿಂದಿನ ಯಾತ್ರಿಕರು ವಿಜಯನಗರದ ವೈಭವವನ್ನು ಕಣ್ಣಾರೆ ಕಂಡು ಹೊಗಳಿದರೆ, ಇಂದಿನವರು ನಾಶ ಮಾಡುತ್ತಿದ್ದಾರೆ."[೧೨]

ವಿಜಯನಗರದ ಇತಿಹಾಸ ರಚನೆ ಇತ್ತೀಚಿನದು "ಸ್ವದೇಶಿ ಪಂಡಿತರು ಸಾಂಸ್ಕೃತಿಕ ಮತ್ತು ರಾಜಕೀಯ ಇತಿಹಾಸವನ್ನು ರಚಿಸಿರಲಿಲ್ಲ. ಕೇವಲ ಪುರಾಣ, ಮಹಾತ್ಮೆ ಇತ್ಯಾದಿ ಧಾರ್ಮಿಕ ಸಾಹಿತ್ಯ ರಚನೆಯಲ್ಲಿ ನಿರತರಾಗಿದ್ದರು. ಹರ್ಷ ಚಕ್ರವರ್ತಿಗೆ ದೊರೆತ ಬಾಣಭಟ್ಟನಂತಹ ಕವಿಯಾಗಲಿ, ಆರನೇ

ವಿಕ್ರಮಾದಿತ್ಯನಿಗೆ ದೊರೆತ ಬಿಲ್ಹಣನಂತಹ ವಿದ್ವಾಂಸನಾಗಲಿ, ವಿಜನಯಗರ ಸಾಮ್ರಾಜ್ಯದಲ್ಲಿದ್ದರೆ ಚರಿತ್ರೆಯ ಕೃತಿಗಳನ್ನು ರಚಿಸುತ್ತಿದ್ದರು. ವಿದೇಶಿ ಯಾತ್ರಿಕರ ಬರವಣಿಗೆಗಳು ಇಲ್ಲದೆ ಹೋಗಿದ್ದರೆ ವಿಜಯನಗರದ ಇತಿಹಾಸ ಅಧ್ಯಯನ ಇಂದಿಗೂ ಮಸುಕಾಗುತ್ತಿತ್ತು.''[೧೩]

''ಅಂತಹ ಪರಿಸ್ಥಿತಿಯಲ್ಲಿ ಬಳ್ಳಾರಿಯ ಜಿಲ್ಲಾಧಿಕಾರಿಯಾಗಿದ್ದ ರಾಬರ್ಟ್‌ಸಿವೆಲ್ (Robert Sewell) ಹಂಪಿಯ ಅವಶೇಷಗಳಿಂದ ಪ್ರಭಾವಿತನಾಗಿ ಅದರ ಇತಿಹಾಸವನ್ನು ತಿಳಿಯುವ ಪ್ರಯತ್ನ ನಡೆಸಿದ ಆದರೆ ಇಲ್ಲಿ ಪ್ರಾಪ್ತವಾದ ವಿಜಯನಗರದ ಶಾಸನಗಳು ಹರಕು ಮುರುಕು ಚಿತ್ರಣವನ್ನು ಕೊಟ್ಟಿವೇ ಹೊರತು ಸಮಗ್ರ ಪರಿಚಯ ಕೊಡುವಲ್ಲಿ ವಿಫಲವಾಗಿದ್ದುವು. ನಂತರ ಸಿವೆಲ್ ಅವರ ನಿರಂತರ ಹುಡುಕಾಟದ ಫಲವಾಗಿ `ಗೋವಾ'ದ ಪತ್ರಗಾರದಲ್ಲಿ ಮತ್ತು ಪೋರ್ಚುಗಲ್ಲಿನ ನ್ಯಾಷನಲ್ ಲೈಬ್ರರಿಯಿಂದ ಸಾಕಷ್ಟು ಮಾಹಿತಿ ಸಂಗ್ರಹವಾಯಿತು. ಅವುಗಳಲ್ಲಿ 'ಡೊಮಿಂಗೊ ಪಯಸ'ನ ಕ್ರಾನಿಕಲ್ಸ್ (ಘಟನಾವಳಿಗಳು), ಫರ್ನಾಜ ನ್ಯೂನಿಜ್‌ನ ಕ್ರಾನಿಕಲ್ಸ್, ಬರೋಸ(Brros)ನ ಡಿಕೆಡಾಸ್ (ದಶಮಾನಗಳು)ನ ಇತ್ಯಾದಿ ಇವುಗಳನ್ನೆಲ್ಲ ಆಧರಿಸಿ ಪ್ರಥಮ ಬಾರಿಗೆ ವಿಜಯನಗರದ ಇತಿಹಾಸವನ್ನು ಕುರಿತು ರಾಬರ್ಟ್‌ಸಿವೆಲ್ ''ದಿ ಫರ್ಗಾಟನ್ ಎಂಪೈರ್'' ಎಂಬ ಕೃತಿಯನ್ನು ರಚಿಸಿ(೧೯೦೦)ದನು.''[೧೪]

ಇದರಿಂದ ಸ್ಫೂರ್ತಿ ಪಡೆದ ಸ್ಥಳೀಯ (ಭಾರತೀಯ) ವಕೀಲರಾಗಿದ್ದ ಸೂರ್ಯನಾರಾಯಣರಾವ್ ಸ್ಥಳೀಯ ಶಾಸನಗಳು ಲಾವಣಿಗಳು, ಅರೆಚಾರಿತ್ರಿಕ ಐತಿಹ್ಯಗಳು ಬಖೈರುಗಳು ಮತ್ತು ಕೈಫಿಯತ್ತುಗಳನ್ನು ಆಧರಿಸಿ ''ನೆವರ್ ಟುಬಿ ಫರ್ಗಾಟನ್ ಎಂಪೈರ್'' (೧೯೦೫) ಪ್ರಕಟಿಸಿದರು. ಸೂರ್ಯನಾರಾಯಣರಾವ್ ಅವರು ಬಳ್ಳಾರಿಯಲ್ಲಿ ವಕೀಲಿ ವೃತ್ತಿ ಮಾಡುತ್ತಿದ್ದಾಗ ದಕ್ಷಿಣ ಭಾರತದಲ್ಲಿ ಕೃಷ್ಣದೇವರಾಯ ಮತ್ತು ತೆನಾಲಿರಾಮನ ಕಥೆಗಳು ಇವರನ್ನು ಬಹಳ ಆಕರ್ಷಿಸಿದವು. ಇಂದಿನ ಆನೆಗೊಂದಿಯ ರಾಜರಾದ ಶ್ರೀರಂಗದೇವರಾಯರನ್ನು ಬಲ್ಲವರಾಗಿದ್ದರು. ಇತಿಹಾಸ ಕೃತಿಯನ್ನು ರಚಿಸುವುದು ಕಷ್ಟವಾಗಿದ್ದರೂ ಸು. ಇಪ್ಪತ್ತು ವರ್ಷಗಳಿಂದ ಈ ಕೃತಿರಚನೆಯ ಯೋಜನೆಯನ್ನು ಹಾಕಿಕೊಂಡಿದ್ದರು. ಮೊದಮೊದಲು ಈ ಕಾರ್ಯವನ್ನು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ನಂತರ ಈಗಿನ ಆನೆಗೊಂದಿಯ ಮಹಾರಾಜರ ಇಷ್ಟಕ್ಕೆ ಅನುಗುಣವಾಗಿ ಆನೆಗೊಂದಿ ಮತ್ತು ಸುತ್ತಣ ಐತಿಹಾಸಿಕ ಧಾರ್ಮಿಕ ಸ್ಥಳಗಳಿಗೆ ರಾಜರೊಂದಿಗೆ ಭೇಟಿ ನೀಡಿ ಮಾಹಿತಿಗಳನ್ನು ಕಲೆ ಹಾಕಿ ಇಂತಹ ಇತಿಹಾಸ ಕೃತಿಯನ್ನು ರಚಿಸಿದರು. ''ನೆವರ್ ಟುಬಿ ಫರ್‌ಗಾಟನ್ ಎಂಪಾಯರ್'' ಇದೊಂದು ಆಚಾರ್ಯ ಕೃತಿ. ಈ ಕೃತಿಯ ಅನುವಾದ ಕನ್ನಡಕ್ಕೆ ವಿಶೇಷ ಕೊಡುಗೆಯಾಗಿದೆ.

ಇಲ್ಲಿ ಅಧ್ಯಯನಕ್ಕೆ ಆಯ್ದುಕೊಂಡಿರುವ ಕನ್ನಡಿಗರ ಕರ್ಮಕತೆ, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಮರೆಯಲಾಗದ ಮಹಾಸಾಮ್ರಾಜ್ಯ ಈ ಮೂರು ಕೃತಿಗಳು ಪ್ರಮುಖವಾದ ಅನುವಾದ

ಕೃತಿಗಳು. ಅಲ್ಲದೆ ಆ ಹೊತ್ತಿನ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಅವು ಬಹಳ ಪ್ರಮುಖವಾದ ಪ್ರಭಾವವನ್ನು ಬೀರಿದವು. ಪ್ರತಿಯೊಬ್ಬರಲ್ಲೂ ಐತಿಹಾಸಿಕ ಪರಿಜ್ಞಾನವನ್ನು ತರುವ ಮೂಲಕ ಸ್ವಾತಂತ್ರ್ಯ ಚಳುವಳಿಗೆ ಸ್ಫೂರ್ತಿಯನ್ನು ಉಂಟುಮಾಡುವಲ್ಲಿ ಈ ಕೃತಿಗಳೂ ಮುಖ್ಯವಾದವು ಎಂಬುದರಲ್ಲಿ ಎರಡು ಮಾತಿಲ್ಲ. ಬಿ. ಸೂರ್ಯನಾರಾಯಣರಾವ್ ಅವರ ಕೃತಿಯು ಬ್ರಿಟಿಷ್‌ರಿಗೆ ವಿಜಯನಗರದ ಇತಿಹಾಸ ಕುರಿತ ಮತ್ತೊಂದು ಆಯಾಮವನ್ನು ಕಾಣಿಸಿತು. ಆ ಮೂಲಕ ಭಾರತದ ಪಾರಂಪರಿಕ ಇತಿಹಾಸವನ್ನು ನೋಡಬಹುದಾದ ಬಹುಮುಖ ನೆಲೆಯನ್ನು ಗಮನಿಸಬಹುದಾಗಿದೆ.

ಒಟ್ಟಾರೆ ಅಂದಿನ ಹಂಪೆಯ ಅಧ್ಯಯನದ ಮೂಲಕ ಇಂದಿನ ಹಂಪೆ ವಿಜಯನಗರವನ್ನು ಕಂಡರಿಸಬೇಕಾಗಿದೆ. ಇತಿಹಾಸ ಪ್ರಸಿದ್ಧ ವಿಜಯನಗರ ಸಾಮ್ರಾಜ್ಯದ ವೈಭವವನ್ನು ಕುರಿತು ವಿದೇಶಿ ಯಾತ್ರಿಕರೂ, ಪ್ರವಾಸಿಗರು ತಮ್ಮ ದಿನಚರಿಗಳ ಮೂಲಕ ಹಾಗೂ ಬರವಣಿಗೆಗಳ ಮೂಲಕ ತಿಳಿಸಿದಂತೆ ಅಂದು ಗತಿಸಿದ ವಿಜಯನಗರ ಸಾಮ್ರಾಜ್ಯದ ಅವಶೇಷಗಳನ್ನು ಇಂದಿನ ಸಂಶೋಧಕರು ಹಾಗೂ ಪ್ರವಾಸಿಗರು ನೋಡಿ ಕುತೂಹಲ ಹೊಂದುವುದು ಸಹಜವಾಗಿದೆ. ಏಕೆಂದರೆ ಹಂಪೆ ಎಂದಾಕ್ಷಣ ಅಲ್ಲಿ ಬಾಳಿ ಬೆಳಗಿದ ಬೃಹತ್ ಸಾಮ್ರಾಜ್ಯವೊಂದರ ನೆನಪು ಮರುಕಳಿಸದಿರದು. ಇದು ಕನ್ನಡಿಗರಿಗಷ್ಟೇ ಅಲ್ಲ ಆಂಧ್ರ ಹಾಗೂ ತಮಿಳುನಾಡಿನ ಜನರೂ ಸಹ ವಿಜಯನಗಗ ಸಾಮ್ರಾಜ್ಯದ ಹೆಸರನ್ನು ಕೇಳಿ ಪುಳಕಗೊಳ್ಳುತ್ತಾರೆ. ಸು.ಕ್ರಿ.ಶ. ೧೩೩೬ ರಿಂದ ೧೫೬೫ ರ ವರೆಗೆ ಆಳಿದ ವಿಜಯನಗರ ಸಾಮ್ರಾಜ್ಯ ರಕ್ಕಸ ತಂಗಡಗಿಯಲ್ಲಿ ನಡೆದ ಭಯಂಕರವಾದ ತಾಳಿಕೋಟೆ ಕದನದಲ್ಲಿ ಸೋಲನ್ನನುಭವಿಸಿದಾಗ ಇಡೀ ದಕ್ಷಿಣ ಭಾರತದ ಜನರು ಸಾಕಷ್ಟು ನೋವನ್ನನುಭವಿಸಿದರು. ಛತ್ರಪತಿ ಶಿವಾಜಿ ಮಹಾರಾಜನು ಇಲ್ಲಿಗೆ ಬಂದು ಇಲ್ಲಿಯ ದುಃಸ್ಥಿತಿಯನ್ನು ಕಂಡು ಮರುಗಿ ಪಂಪಾಪತಿ ಶ್ರೀ ವಿರೂಪಾಕ್ಷನ ಪೂಜಾ ಸೇವೆ ಚೆನ್ನಾಗಿ ನಡೆಯಬೇಕೆಂದು ಆನೆಗೊಂದಿಯ ಮಹಾರಾಜರಿಗೆ ಕೆಲವು ದತ್ತಿಗಳನ್ನು ಬಿಟ್ಟುಕೊಟ್ಟ ವಿಷಯ ತಿಳಿದುಬರುವುದು. ಅಂದಿನ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಇಂದು ಧಾರ್ಮಿಕ ಕ್ಷೇತ್ರ ಹಂಪಿಯಾಯಿತು. ಮಹಾರಾಜನ ಸ್ಥಾನದಲ್ಲಿ ಸಾಕ್ಷಾತ್ ವಿರುಪಾಕ್ಷನು ನೆಲೆಸಿದನು. ಪಾಳುಬೀಳಾದ ಸ್ಮಾರಕಗಳು ಗತವೈಭವವನ್ನು ಸಾರುವ ಸಂಕೇತಗಳಾಗಿ ನಿಲ್ಲುವಂತಾಯಿತು.

**ಕೊನೆ ಟಿಪ್ಪಣಿಗಳು**

೧. ವಸುಂಧರಾ ಫಿಲಿಯೋಜಾ : *ಅಳಿದುಳಿದ ಹಂಪೆ*, ಪು. ೧.

೨. .....ಅದೇ.....ಪು. ೨.

೩. ......ಅದೇ....ಪು. ೩.

೪. ವಿವೇಕ ರೈ (ಸಂ) : *ಪ್ರವಾಸಿ ಕಂಡ ವಿಜಯನಗರ*, ಪು. ೭.

೫. ಸದಾನಂದ ಕನವಳ್ಳಿ (ಅನು) : *ಮರೆತುಹೋದ ಮಹಾಸಾಮ್ರಾಜ್ಯ*, ಪು. ೯೨-೯೩.

೬. ವಿವೇಕ ರೈ (ಅನು) : *ಪ್ರವಾಸಿ ಕಂಡ ವಿಜಯನಗರ*, ಪು. ೧೦.

೭. ಕೊಟ್ರಯ್ಯ ಸಿ.ಟಿ.ಎಂ. : *ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ*, ಪು. ೩೦.

೮. ಗಳಗನಾಥ : *ಕನ್ನಡಿಗರ ಕರ್ಮಕತೆ*, ಪು. ೨೩೪.

೯. ವಿ. ಸೀತಾರಾಮಯ್ಯ : *ಪಂಪಾಯಾತ್ರೆ*, ಪು. ೩೭-೩೮.

೧೦. ಪ್ರಜಾವಾಣಿ : ೨೦ನೇ ಮೇ ೨೦೦೭, ಪು. ೮.

೧೧. ಫಾಲಾಕ್ಷ : *ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ*, ಪು. ೭೦.

೧೨. ......ಅದೇ...... ಪು. ೭೪.

೧೩. ......ಅದೇ....ಪು. ೭೪.

೧೪. ರವೀಂದ್ರಕುಮಾರ ಜೆ., : *ಮೌಖಿಕ ಚರಿತ್ರೆ*, ೨೦೦೩.

* * * *

## ಅಧ್ಯಾಯ ೩

## ಸಾಂಸ್ಕೃತಿಕ ಸ್ವರೂಪ

### ಭಾಷಾ ಮೂಲ, ಸಾಹಿತ್ಯ, ರಾಜಕೀಯ, ಧರ್ಮ ಮತ್ತು ಸಮಾಜ

ವಿಜಯನಗರ ಸಾಮ್ರಾಜ್ಯವು ಕರ್ನಾಟಕದ ಇತಿಹಾಸದಲ್ಲಿ ೩೦೦ ವರ್ಷಗಳಿಗೂ ಹೆಚ್ಚು ಕಾಲ ಆಡಳಿತ ನಡೆಸಿರುವ ಮಹಾ ವೈಭವೋಪೇತ ರಾಜ್ಯವೆನಿಸಿದೆ. ಇದು ಹೊಯ್ಸಳ ಸಾಮ್ರಾಜ್ಯದ ಪತನಾನಂತರ ಕ್ರಿ.ಶ. ೧೩೩೬ ರಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಸಾಮ್ರಾಜ್ಯ ಹಿಂದೂ ಧರ್ಮದ ಉಳಿವಿಗಾಗಿ ಸತತವಾಗಿ ಶ್ರಮಿಸಿದ ಕಾರಣ, ಇತಿಹಾಸದ ಪುಟಗಳಲ್ಲಿ ಹೆಚ್ಚು ಪ್ರಾಧಾನ್ಯತೆಯನ್ನು ಪಡೆದಿದೆ.

ಒಂದು ಮಹಾಸಾಮ್ರಾಜ್ಯವು ಸಾಂಸ್ಕೃತಿಕವಾಗಿ ಸದೃಢತೆಯಿಂದ ಬೆಳೆಯಲು ಅಲ್ಲಿಯ ಭಾಷೆ, ಲಿಪಿ, ಸಾಹಿತ್ಯ, ಧರ್ಮ, ರಾಜಕೀಯ, ಕಲೆ, ಸಂಪ್ರದಾಯ, ಪರಂಪರೆ ಇತ್ಯಾದಿಗಳು ಗಮನಾರ್ಹವಾಗಿದ್ದಾಗ ಮಾತ್ರ ಸಾಧ್ಯ. ಆಗ ಮಾತ್ರವೇ ಅದನ್ನು ಸುಸಂಸ್ಕೃತ ನಾಗರೀಕ ಸಮಾಜವೆಂದು ಕರೆಯಬಹುದು. ಅಲ್ಲದೇ ಐತಿಹಾಸಿಕ ಪರಂಪರೆಯಾಗಿ ಇದನ್ನು ಮತ್ತೆ ಮತ್ತೆ ಮಾದರಿಯಾಗಿ ಉಲ್ಲೇಖಿಸುವುದು ಗಮನಾರ್ಹ.

### * ಭಾಷಾ ಮೂಲ

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಕಾಲದ ಹೊತ್ತಿಗಾಗಲೇ ಕನ್ನಡ ಯುಗವೆಂದು ಕರೆಯಲ್ಪಡುವ ವಚನ ಚಳವಳಿಯು ಘಟಿಸಿ ಆಗಿತ್ತು. ಕಲ್ಯಾಣ ಕ್ರಾಂತಿ ರಾಜಕೀಯದಂತೆಯೇ ಭಾಷಿಕ ಮತ್ತು ಸಾಹಿತ್ಯಕ ಪುನರ್ ನಿರ್ಮಾಣ ಅಗತ್ಯವನ್ನು ಪ್ರತಿಪಾದಿಸಿತ್ತು. ಶಿವಶರಣರು ಎಲ್ಲೆಡೆ ಚದುರಿ ಹೋಗಿದ್ದರು. ತಮ್ಮ ಕೈಗೆ ಸಿಕ್ಕಷ್ಟು ವಚನ ಸಂಗ್ರಹವನ್ನು ಎತ್ತಿಕೊಂಡು ಕನ್ನಡ ಭಾಷಿಕ, ಕನ್ನಡ ಧಾರ್ಮಿಕ ಪ್ರಕ್ರಿಯೆಗಳು ಮತ್ತೆ ಗಂಭೀರವಾಗಿ ಪುನರುತ್ಥಾನ ಸಾಧಿಸುವುದಕ್ಕೆ ಒಂದು ಮಹಾ ಸಾಮ್ರಾಜ್ಯದ ಅಗತ್ಯವಿತ್ತು. ಕನ್ನಡ ಜನತೆಯ ಅರಕೆಯ ಮತ್ತು ತಪಸ್ಸಿನ ಫಲವಾಗಿಯೇ ಎಂಬಂತೆ ಕ್ರಿ.ಶ. ೧೩೩೬

ರಲ್ಲಿ ವಿಜಯ ವಿದ್ಯಾರಣ್ಯರ ಮಾರ್ಗದರ್ಶನದಂತೆ ಹಕ್ಕ-ಬುಕ್ಕರು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಕನ್ನಡ ಸೀಮೆಯಲ್ಲಿ ಉತ್ತರ-ದಕ್ಷಿಣಗಳು ಸುಸಂಧಿಸುವಲ್ಲಿ ಹುಟ್ಟಿಕೊಂಡ ಈ ರಾಜ್ಯವು ಮುಂದೆ ಸಮಗ್ರ ಕರ್ನಾಟಕ ಮಾತ್ರವಲ್ಲ ಹೆಚ್ಚುಕಮ್ಮಿ ದಕ್ಷಿಣ ಭಾರತದ ಮಹಾನ್ ಸಾಮ್ರಾಜ್ಯವಾಗಿ ಮೆರೆಯಿತು. ಈ ಸಾಮ್ರಾಜ್ಯದ ಸ್ಥಾಪಕರು ಯಾವ ಭಾಷೆಯವರು? ಎಂಬುದು ಮುಖ್ಯವಾಗಿ ಚರ್ಚಿತವಾದ ವಿಷಯ. ಏಕೆಂದರೆ ಭಾಷೆಯು ಒಂದು ಸಂಸ್ಕೃತಿಯ ಉಪಉತ್ಪನ್ನ (by product)ವಾಗಿರುವುದರಿಂದ ಸಾಂಸ್ಕೃತಿಕ ಹಿರಿಮೆ-ಗರಿಮೆಗಳನ್ನು ಕುರಿತು ಅಧ್ಯಯನ ಮಾಡುವುದು ಅತ್ಯವಶ್ಯ. ಈ ಹಿನ್ನೆಲೆಯಲ್ಲಿ ಭಾಷಾ ಮೂಲ ಕುರಿತಂತೆ ವಿವಿಧ ಚರ್ಚೆಗಳನ್ನು ಇಲ್ಲಿ ವಿವರಿಸಲಾಗಿದೆ.

ವಿಜಯನಗರ ಸಾಮ್ರಾಜ್ಯದ ಸ್ಥಾಪಕರ ಮೂಲ ಮತ್ತು ಸ್ಥಾಪನೆಯಾದ ಸನ್ನಿವೇಶ ಗೊಂದಲಮಯವಾಗಿದೆ. ಈ ಮಹಾಸಾಮ್ರಾಜ್ಯದ ಸ್ಥಾಪಕರು ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರಾಯರೆಂಬುದು ನಿರ್ವಿವಾದವಾದ ಸಂಗತಿಯಾಗಿದೆ. ಆದರೆ ಇವರು ಯಾರು? ಕರ್ನಾಟಕದವರೋ? ಅಥವಾ ಆಂಧ್ರದವರೋ? ಎಂಬುದು ವಾದ ವಿವಾದಕ್ಕೆಡೆ ಮಾಡಿದೆ. ಇದರಲ್ಲಿ ಪ್ರಾದೇಶಕ ಅಭಿಮಾನವೂ ಮೊಳೆತಿರುವುದುಂಟು. ಹಾಗಾಗಿ ಕನ್ನಡ ಮತ್ತು ತೆಲುಗು ಮೂಲದ ವ್ಯಾಖ್ಯಾನಗಳು ಮಂಡನೆಯಾಗಿವೆ.

## ತೆಲುಗು ಮೂಲ

ಈ ಸಾಮ್ರಾಜ್ಯದಲ್ಲಿ ಆಳ್ವಿಕೆ ನಡೆಸುತ್ತಿದ್ದ ಅರಸು ಮನೆತನದವರು ಆಡುತ್ತಿದ್ದ ಭಾಷೆ ಯಾವುದು? ಎಂಬ ವಿಷಯವಾಗಿ ವಿದ್ವಾಂಸರಲ್ಲಿ ನಾನಾ ರೀತಿಯ ಚರ್ಚೆಗಳು ಭಿನ್ನಾಭಿಪ್ರಾಯಗಳಿವೆ. "ತೆಲುಗು ಮೂಲವನ್ನು ಪ್ರತಿಪಾದಿಸಿದವರು ರಾಬರ್ಟ್ ಸಿವೆಲ್, ರಂಗಾಚಾರಿ, ಎನ್. ವೆಂಕಟರಮಣಯ್ಯ, ನೀಲಕಂಠಶಾಸ್ತ್ರಿ ಮುಂತಾದವರು ಇವರ ಸಮರ್ಥನೆಗೆ ಇಬನ್-ಇ-ಬತೂತ, ಫೆರಿಸ್ತಾ ಇಷಾಮಿಯರ ಹೇಳಿಕೆಗಳೇ ಆಧಾರವಾಗಿವೆ"[9] ವಿಜಯನಗರದ ಸ್ಥಾಪಕರಾದ ಹರಿಹರ ಮತ್ತು ಬುಕ್ಕರು ಸಂಗಮ ವಂಶಕ್ಕೆ ಸೇರಿದವರಾಗಿದ್ದು, ಈ ಸಹೋದರರು ತೆಲುಗು ಮೂಲದವರೆಂದು ಕೆಲವು ಕೃತಿಗಳು ತಿಳಿಸುತ್ತವೆ.

ಉದಾಹರಣೆಗೆ ಶಿವತತ್ವರತ್ನಾಕರ, ವಿದ್ಯಾರಣ್ಯ ವೃತ್ತಾಂತ, ವಿದ್ಯಾರಣ್ಯ ಕಾಲಜ್ಞಾನ ಇತ್ಯಾದಿ ಕೃತಿಗಳು ರಾಜರ ತೆಲಗು ಮೂಲವನ್ನು ಪುಷ್ಠೀಕರಿಸಿವೆ. ಹಾಗೆಯೇ ತೆಲುಗು ಮೂಲ ವಾದವು ಮುಸ್ಲಿಂ ಚರಿತ್ರಾಕಾರರ ಮಾಹಿತಿಗಳನ್ನೊಳಗೊಂಡಿದೆ. "ಕೆಲವು ಶಾಸನಗಳನ್ನು ಗ್ರಹಿಸಿದ್ದು ಮತ್ತೊಂದು ಕಾರಣವಾಗಿದೆ. ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರು ಕಾಕತೀಯ ಪ್ರತಾಪರುದ್ರನ ಅಧಿಕಾರಿಗಳಾಗಿದ್ದರು. ದೆಹಲಿಯ ಸುಲ್ತಾನ ಮಹಮದ್‌ಬಿನ್ ತುಘಲಕ್‌ನು ಕಾಕತೀಯರನ್ನು ಸೋಲಿಸಿ ವಾರಂಗಲ್ಲನ್ನು ಆಕ್ರಮಿಸಿ ಅದರ ಆಳ್ವಿಕೆಯನ್ನು ನೋಡಿಕೊಳ್ಳಲು 'ಮಲಿಕ್ ಮಕ್ಬೂಲ'ನನ್ನು ನೇಮಿಸಿದ. ಹರಿಹರ ಮತ್ತು ಬುಕ್ಕರನ್ನು ಸೆರೆಹಿಡಿದು ದೆಹಲಿಗೆ ಕಳಿಸಲಾಯಿತು. ಅವರು ಮತಾಂತರವಾಗಿ ಸುಲ್ತಾನನಿಗೆ

ನಿಷ್ಠೆಯಿಂದ ಸೇವೆ ಸಲ್ಲಿಸಿದರು. ಇದರಿಂದ ಸಂತೋಷಗೊಂಡ ಸುಲ್ತಾನನು ಕಂಪಲಿ ಪ್ರದೇಶದಲ್ಲಿ ದಂಗೆ ನಡೆದಾಗ, ಅವರಿಬ್ಬರನ್ನು ಅಲ್ಲಿ ಆಡಳಿತ ನೋಡಿಕೊಳ್ಳಲು ಕಳುಹಿಸಿದ. ಅವರು ಪುನಃ ಹಿಂದೂ ಧರ್ಮ ಸ್ವೀಕರಿಸಿ ಸ್ವತಂತ್ರವಾದ ಸಾಮ್ರಾಜ್ಯವನ್ನು ಕಟ್ಟಿದರು. ಈ ರಾಜ್ಯವೇ ವಿಜಯನಗರ ಸಾಮ್ರಾಜ್ಯವೆಂದು ತೆಲುಗು ಮೂಲವನ್ನು ವೆಂಕಟರಮಣಯ್ಯ ಮತ್ತಷ್ಟು ಸಮರ್ಥಿಸುತ್ತಾರೆ."[೨]

ಕಾಕತೀಯರು 'ವರಾಹ' ಲಾಂಛನವನ್ನು ಹೊಂದಿದ್ದರು. ಹಾಗೂ ನಾಯಕರ ಆಡಳಿತ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದರು. ಈ ಎರಡೂ ಅಂಶಗಳನ್ನು ಹರಿಹರ ಮತ್ತು ಬುಕ್ಕರು ಅನುಸರಿಸಿ ರೂಪಿಸಿಕೊಂಡಿದ್ದರು ಎಂದು ತಿಳಿದು ಬರುತ್ತದೆ. ಹರಿಹರನು ಕಾಕತೀಯರ ಪತನದ ನಂತರ ವಾರಂಗಲ್ಲನ್ನು ಆಕ್ರಮಣ ಮಾಡಿದ ಆಗ ಮಹಮದ್ ಬಿನ್ ತೊಘುಲಕ್‌ನು ಹರಿಹರನನ್ನು ಕಂಪ್ಲಿಯ ಪ್ರಾಂತ್ಯಾಧಿಕಾರಿಯನ್ನಾಗಿ ನೇಮಕ ಮಾಡಿದ. ನಂತರ ಹರಿಹರನು ವಿದ್ಯಾರಣ್ಯರ ಆಶೀರ್ವಾದದಿಂದ ಹಿಂದೂ ಧರ್ಮವನ್ನು ಸ್ವೀಕರಿಸಿ ಕ್ರಿ.ಶ. ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದ. ಮೊದಲು ಈತನು ಆನೆಗೊಂದಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು.

"ಒಂದು ಕತೆಯ ಪ್ರಕಾರ ಹರಿಹರ ಮತ್ತು ಬುಕ್ಕರಾಯರು ರಾಜವಂಶದವರಲ್ಲ. ಅವರು ಮೂಲತಃ ಕುರುಬರು ಎಂಬ ಅಂಶವನ್ನು ಗಮನಿಸಲು ಕೆಳಗಿನ ವಿಚಾರಗಳನ್ನು ಗಮನಿಸಬಹುದು. "ಮಾಧವನು (ವಿದ್ಯಾರಣ್ಯ) ಸನ್ಯಾಸಿ ಜೀವನವನ್ನು ನಡೆಸುತ್ತಿದ್ದಾಗ, ಬುಕ್ಕನೆಂಬ ಬಡಕುರುಬ ತಂದುಕೊಡುತ್ತಿದ್ದ ಊಟಗಳೇ ಅವನ ಆಧಾರಗಳಾಗಿದ್ದವು. ಒಂದು ದಿನ ಬ್ರಾಹ್ಮಣ ವಿದ್ಯಾರಣ್ಯರು ಬುಕ್ಕನಿಗೆ ನೀನು ರಾಜ ಮತ್ತು ಸಾಮ್ರಾಟನಾಗುವಿ ಎಂದು ಹೇಳಿದರು. ಉಳಿದ ಕುರುಬರು ಇದನ್ನು ತಿಳಿದು ಈ ಕುರುಬನನ್ನು ಭಕ್ತಿಯಿಂದ ಕಾಣತೊಡಗಿದರು. ಮತ್ತು ಅವನನ್ನು ತಮ್ಮ ಮುಖಂಡನನ್ನಾಗಿ ಮಾಡಿಕೊಂಡರು."[೩] ಈ ಹೇಳಿಕೆಗೆ ಇಬನ್-ಬತೂತ ಮತ್ತು ನೂನಿಜ್‌ರ ಹೇಳಿಕೆಗಳೇ ಕಾರಣಗಳಾಗಿವೆ. ಇದನ್ನು ಸಿವೆಲ್ ಮಹಾಶಯನೂ ಕೂಡ ಪ್ರತಿಪಾದಿಸುತ್ತಾನೆ. ಆದರೆ ಆಧಾರಗಳ ಕೊರತೆಯಿಂದಾಗಿ ಈ ವಾದವನ್ನು ಒಪ್ಪಿಕೊಳ್ಳಲಾಗಿಲ್ಲ. ವಿಜಯನಗರದ ಅರಸರ ಭಾಷೆಯೂ ಸಹ ಹೀಗೆಯೇ ಬೇರೆ ಬೇರೆ ವಿವಾದಕ್ಕೆಡೆ ಮಾಡಿದೆ.

## ಕನ್ನಡ ಮೂಲ

ವಿಜಯನಗರದ ಅರಸರು ತೆಲುಗರಲ್ಲ; ಕನ್ನಡ ಮೂಲದವರು ಎಂಬ ಬಗೆಗೆ ಈಗ ಸಾಕಷ್ಟು ಆಧಾರಗಳು ಸಿಕ್ಕಿವೆ. ಈ ಅರಸರು ಕನ್ನಡ ಮೂಲವನ್ನು ಹೊಂದಿರುವರೆಂದು ಎಚ್. ಕೃಷ್ಣಶಾಸ್ತ್ರಿ, ಶ್ರೀಕಂಠಯ್ಯ, ಫಾದರ್ ಹೆರಾಸ್, ಎಸ್.ಕೆ. ಅಯ್ಯಂಗಾರ್, ಸಾಲೆತೊರೆ, ಪಿ.ಬಿ. ದೇಸಾಯಿಯವರು ಪ್ರತಿಪಾದಿಸಿದ್ದಾರೆ.

"ಹರಿಹರನು ಕ್ರಿ.ಶ ೧೩೩೬ರಲ್ಲಿ ತನ್ನ ಸಹೋದರರಾದ ಕಂಪಣ, ಬುಕ್ಕರಾಯ, ಮಾರಪ್ಪ, ಮುದ್ದಪ್ಪರ ನೆರವಿನೊಂದಿಗೆ ತುಂಗಭದ್ರೆಯ ತೀರದ ಮೇಲೆ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದ. ಇವರು ಸಂಗಮನ ಮಕ್ಕಳಾದುದರಿಂದ ಸಂಗಮ ವಂಶಸ್ಥರೆಂದು ಕರೆಯಲಾಗಿದೆ. ಇವರು ಹಂಪೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡರು. ಇದನ್ನು ಪಂಪಾಕ್ಷೇತ್ರ, ಭಾಸ್ಕರಕ್ಷೇತ್ರ, ವಿರೂಪಾಕ್ಷಪಾದ, ಹೊಸಪಟ್ಟಣ, ವಿರೂಪಾಕ್ಷಪುರ, ವಿದ್ಯಾನಗರ ಹೀಗೆ ಹಲವಾರು ಹೆಸರುಗಳಿಂದ ಕರೆಯಲಾಗಿತ್ತು. ಹಂಪಿಯ ಆದಿದೇವತೆಯಾದ ವಿರುಪಾಕ್ಷ (ಶಿವ)ನ ಅಂಕಿತದಲ್ಲಿ ಅವರು ಆಡಳಿತವನ್ನು ನಡೆಸಿದರು. ಅವರು ಅಂಕಿತನಾಮವನ್ನು 'ಶ್ರೀ ವಿರೂಪಾಕ್ಷ' ಎಂದು ಕನ್ನಡದಲ್ಲಿ ಹಾಕುತ್ತಿದ್ದರು. ಭಾರತದ ದೀರ್ಘ ಇತಿಹಾಸದಲ್ಲೇ ದೇವರ ಹೆಸರಿನಲ್ಲಿ ಆಡಳಿತ ನಡೆಸಿದ ರಾಜ್ಯ ಇದೊಂದೆ ಎಂಬುದನ್ನು ಮುಖ್ಯವಾಗಿ ಗಮನಿಸಬೇಕು."[೪] ತಮ್ಮ ಹೆಸರಿನ ಉಳಿವಿಗಾಗಿ ಹಾಗೂ ಕೀರ್ತಿಯ ಬೆಳವಣಿಗೆಗಾಗಿ ಹಿಂದಿನ ರಾಜಮಹಾರಾಜರು, ಇಂದಿನ ಮಂತ್ರಿ ಮಹೋದಯರು ಏನೆಲ್ಲಾ ಮಾಡುತ್ತಾರೆ. ಆದರೆ ವ್ಯತಿರಿಕ್ತವಾಗಿ ದೇವರ ಹೆಸರಿನಲ್ಲಿ ಆಡಳಿತ ನಡೆಸಿದ ರಾಜ್ಯ ಇದೊಂದೇ ಎನ್ನುವುದು ಗಮನಾರ್ಹ ಅಂಶವಾಗಿದೆ.

ವಿಜಯನಗರ ಅರಸರು ಪಡೆದುಕೊಂಡಿರುವ ಬಿರುದುಗಳನ್ನು ಗಮನಿಸಿದಾಗ ಪ್ರಾಯಶಃ ಇವರು ತೆಲುಗಿನಿಂದ ಬಂದವರಲ್ಲ, ಇವರು ಕನ್ನಡಿಗರೆ ಎಂಬ ವಿಚಾರ ಮೂಡುವುದು. "ಭಾಷೆಗೆ ತಪ್ಪದ ರಾಯರ ಗಂಡ; ಮೂರು ರಾಯರ ಗಂಡ; ಎನ್ನುವ ವಿಜಯನಗರದ ಅರಸರ ಕನ್ನಡ ಬಿರುದುಗಳು ಅವರ ಸಂಸ್ಕೃತ, ತೆಲಗು ಮತ್ತು ತಮಿಳು ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ. ವಿಜಯನಗರದ ರಾಜರು ತಾವು ಆಂಧ್ರದಿಂದ ಬಂದವರೆಂದು ಒಂದು ಬಾರಿಯೂ ಉಲ್ಲೇಖಿಸಿಲ್ಲ."[೫]

೨ನೇ ದೇವರಾಯನ ಆಸ್ಥಾನದಲ್ಲಿದ್ದ ತೆಲಗು ಕವಿ ತನ್ನ ಪ್ರಭುವನ್ನು 'ಕರ್ನಾಟಕ ಕ್ಷಿತಿನಾಥ' ಎಂದು ಬಣ್ಣಿಸಿರುವನು. ಕೃಷ್ಣದೇವರಾಯನ ಆಸ್ಥಾನದ ತೆಲಗು ಕವಿ ಪೆದ್ದಣನು ತನ್ನ 'ಮನು ಚರಿತಮು' ಎಂಬ ತೆಲಗು ಕೃತಿಯಲ್ಲಿ ತನ್ನ ಪೋಷಕ ಕೃಷ್ಣದೇವರಾಯನನ್ನು 'ಕನ್ನಡರಾಜ್ಯ ರಮಾರಮಣ' ಎಂದು ಕರೆದಿದ್ದಾನೆ. ಕೃಷ್ಣದೇವರಾಯನು ತನ್ನ 'ಅಮುಕ್ತ ಮಾಲ್ಯದ' ಎಂಬ ತೆಲಗು ಕಾವ್ಯದಲ್ಲಿ ತನ್ನನ್ನು 'ಕನ್ನಡ ರಾಯ' ಎಂದು ಕರೆದುಕೊಂಡಿದ್ದಾನೆ. ಫೆರಿಸ್ತಾ ವಿಜಯನಗರದ ದೊರೆಗಳನ್ನು 'ಕರ್ನಾಟಕದ ರಾಯರು' ಎಂದೇ ಕರೆದಿದ್ದಾನೆ.

ವಿಜಯನಗರದ ಅರಸರು ಕನ್ನಡ ಭಾಷೆಯ ಬಗ್ಗೆ ವಿಶೇಷ ಅಭಿಮಾನ ಹಾಗೂ ಆಸಕ್ತಿಯನ್ನು ಹೊಂದಿದ್ದರು. ಕನ್ನಡ ನಾಡು-ನುಡಿಗೆ ಹೆಚ್ಚಿನ ಮಹತ್ವ ಕೊಟ್ಟಿದ್ದರೆಂಬುದಕ್ಕೆ ಅವರ ಶಾಸನಗಳ ಭಾಷೆ ಮತ್ತು ಕನ್ನಡ ಲಿಪಿ ನಿರ್ದಿಷ್ಟವಾದ ವಿವರಗಳನ್ನು ಒದಗಿಸುತ್ತದೆ. ಈಗ ಲಭ್ಯವಿರುವ ಸುಮಾರು ಐದು ಸಾವಿರ ಶಾಸನಗಳಲ್ಲಿ ಅರ್ಧಕ್ಕಿಂತ ಹೆಚ್ಚು ಶಾಸನಗಳು ಕನ್ನಡ ಭಾಷೆಯಲ್ಲಿವೆ. ನೆರೆಯ ರಾಜ್ಯಗಳಾದ

ಆಂಧ್ರ ಮತ್ತು ತಮಿಳುನಾಡಿನಲ್ಲಿಯೂ ದೊರೆತ ಶಾಸನಗಳು ಕನ್ನಡ ಭಾಷೆಯಲ್ಲಿರುವುದನ್ನು ಗಮನಿಸಬಹುದು. ವಿಜಯನಗರ ಸಾಮ್ರಾಜ್ಯವು 'ಕರ್ನಾಟಕ ರತ್ನ ಸಿಂಹಾಸನ' ಎಂದೇ ಪ್ರಖ್ಯಾತವಾಗಿತ್ತು.

ಒಟ್ಟಾರೆ ವಿಜಯನಗರ ಸಾಮ್ರಾಜ್ಯದಲ್ಲಿ ಕನ್ನಡ ಮತ್ತು ತೆಲಗು ಭಾಷೆಗಳು ಜನಪ್ರಿಯವಾಗಿದ್ದವು. ಜನರು ಎರಡು ಭಾಷೆಗಳಲ್ಲಿಯೂ ವ್ಯವಹಾರ ಮಾಡುತ್ತಿದ್ದರು. ಕನ್ನಡ ಭಾಷೆಗೆ ಕನ್ನಡದ ರಾಯರು ಹೆಚ್ಚು ಆದ್ಯತೆಯನ್ನು ಕೊಟ್ಟಿದ್ದರು. 'ರಾಯ' ಎಂಬ ಪದವು 'ರಾಜ' ಎಂಬ ಸಂಸ್ಕೃತ ಪದದ ತದ್ಭವ ರೂಪ ಎಂಬುದನ್ನು ಗಮನಿಸಿದಾಗ ವಿಜಯನಗರ ಸಾಮ್ರಾಟರು ತೆಲುಗರಲ್ಲ ಕನ್ನಡಿಗರೆ ಎಂಬ ಅಂಶ ಬೆಳಕಿಗೆ ಬರುವುದು. ಆದರೆ ವಿಜಯನಗರ ಸಾಮ್ರಾಜ್ಯದ ಆಸ್ಥಾನದಲ್ಲಿ ತೆಲಗು ಕವಿಗಳು ಹೆಚ್ಚಾಗಿ ಇದ್ದುದರಿಂದ ತೆಲುಗು ಭಾಷೆಯ ಪ್ರಭಾವ ಹೆಚ್ಚಾಗಿತ್ತು ಎಂದು ಕಾಣುತ್ತದೆ.

*** ವಿಜಯನಗರ ಕಾಲದ ಸಾಹಿತ್ಯ**

ವಿಜಯನಗರ ಸಾಮ್ರಾಜ್ಯದ ಎಲ್ಲ ಅರಸರು ಸಾಂಸ್ಕೃತಿಕವಾದ ಎಲ್ಲ ರಂಗಗಳಿಗೂ ತಮ್ಮದೇ ಆದ ಅನುಪಮ ಕೊಡುಗೆಗಳನ್ನು ನೀಡಿರುವರು. ಒಂದು ಸಂಸ್ಕೃತಿಯ ಬೆಳವಣಿಗೆಯ ಮೂರ್ತರೂಪವೇ ಸಾಹಿತ್ಯ ಎಂಬುದಕ್ಕೆ ಜೀವಂತ ಸಾಕ್ಷಿ ವಿಜಯನಗರ ಸಾಮ್ರಾಜ್ಯದ ಸಾಹಿತ್ಯ. ಈ ಕಾಲದಲ್ಲಿ ಹಲವಾರು ಭಾಷೆಯ ಸಾಹಿತ್ಯ ಕೃತಿಗಳು ರಚನೆಯಾದವು.

"ವೀರಶೈವರು ಕನ್ನಡ ಭಾಷೆಯಲ್ಲೂ, ದ್ವೈತಿಗಳು ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲೂ, ವಿಶಿಷ್ಟಾದ್ವೈತಿಗಳು ಮುಖ್ಯವಾಗಿ ತಮಿಳು ಭಾಷೆಯಲ್ಲೂ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಈ ಕಾಲದ ಸಾಹಿತ್ಯದ ಹರವು ವಿಸ್ತಾರವಾದುದು. ಸಾಹಿತ್ಯ ಕ್ಷೇತ್ರದಲ್ಲಿ ಸಮೃದ್ಧ ಕೃಷಿ ನಡೆದಂತೆ ವೈವಿಧ್ಯಮಯವಾದ ಕೃತಿಗಳು ನಿರ್ಮಾಣಗೊಂಡವು. ಈ ಕಾಲವು ಯುರೋಪಿನ ನವೋದಯ ಮತ್ತು ನವೋದಯೋತ್ತರ ಸಾಹಿತ್ಯ ಚಳುವಳಿಯನ್ನು ನೆನಪಿಸುತ್ತದೆ."[೬] ಎಂಬ ಶಿವರುದ್ರ ಸ್ವಾಮಿಯವರ ಅಭಿಪ್ರಾಯವು ಗಮನಾರ್ಹವಾದುದು.

**ಕನ್ನಡ ಸಾಹಿತ್ಯ**

ವಿಜಯನಗರ ಸಾಮ್ರಾಟರು ಸುಸಂಸ್ಕೃತರು, ವಿದ್ಯಾ ಪಕ್ಷಪಾತಿಗಳೂ ಆಗಿದ್ದರು. ಇವರಲ್ಲಿ ಅನೇಕ ಅರಸರು ಸ್ವತಃ ವಿದ್ವಾಂಸರಾಗಿದ್ದು, ಅವರು ದಕ್ಷಿಣ ಭಾರತದ ಎಲ್ಲ ಪ್ರಮುಖ ಭಾಷೆಗಳ ಸಾಹಿತ್ಯಾಭಿವೃದ್ಧಿಗೆ ಪ್ರೋತ್ಸಾಹ ನೀಡಿದ್ದರು. ೨ನೇ ಹರಿಹರ ಮತ್ತು ಪ್ರೌಢದೇವರಾಯನ ಕಾಲದಲ್ಲಿ ಕನ್ನಡ ಸಾಹಿತ್ಯ ವಿಶೇಷವಾಗಿ ಸಮೃದ್ಧಿಯನ್ನು ಹೊಂದಿತ್ತು. ಭೀಮಕವಿಯ 'ಬಸವ ಪುರಾಣ', ಸಿಂಗಿರಾಜನ 'ಸಿಂಗಿರಾಜ ಪುರಾಣ,' ಚಾಮರಸನ 'ಪ್ರಭುಲಿಂಗ ಲೀಲೆ,' ಲಕ್ಕಣ್ಣ ದಂಡೇಶನ 'ಶಿವತತ್ವ ಚಿಂತಾಮಣಿ,' ಗುಬ್ಬಿ

ಮಲ್ಲಣಾರ್ಯನ 'ಭಾವ ಚಿಂತಾರತ್ನ' ಮತ್ತು 'ವೀರಶೈವಾಮೃತ', ಕುಮಾರವ್ಯಾಸನ 'ಕರ್ಣಾಟಕ ಭಾರತ ಕಥಾಮಂಜರಿ' ಅಥವಾ 'ಗದುಗಿನ ಭಾರತ', ತಿಮ್ಮಣ್ಣ ಕವಿಯ 'ಕೃಷ್ಣರಾಯ ಭಾರತ', ಕುಮಾರ ವಾಲ್ಮೀಕಿಯ (ನರಹರಿಯ) 'ತೊರವೆ ರಾಮಾಯಣ', ಲಕ್ಷ್ಮೀಶನ 'ಜೈಮಿನಿ ಭಾರತ', ಪುರಂದರದಾಸ ಮತ್ತು ಕನಕದಾಸ ಮೊದಲಾದವರ ಕೀರ್ತನೆಗಳು ಮತ್ತು ಭಟ್ಟಾಕಳಂಕನ 'ಶಬ್ದಾನುಶಾಸನ' ಇವುಗಳು ವಿಜಯನಗರ ಕಾಲದ ಪ್ರಮುಖ ಕೃತಿಗಳಾಗಿವೆ.

**ಸಂಸ್ಕೃತ ಸಾಹಿತ್ಯ**

ವಿಜಯನಗರದ ಅರಸರು ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದಂತೆಯೇ ಸಂಸ್ಕೃತ ಸಾಹಿತ್ಯಾಭಿವೃದ್ಧಿಗೂ ವಿಶೇಷ ಗಮನ ನೀಡಿದರು. ವೇದಾಂತ ದೇಶಿಕ, ಮಾಧವಾಚಾರ್ಯ (ವಿದ್ಯಾರಣ್ಯ) ಸಾಯಣಾಚಾರ್ಯ, ಅಪ್ಪಯ್ಯ ದೀಕ್ಷಿತ, ರಘುನಾಥ ನಾಯಕ, ಕೃಷ್ಣದೇವರಾಯ, ಜಯತೀರ್ಥ, ವ್ಯಾಸರಾಯ, ವಾದಿರಾಜ, ರಾಜನಾಥ ಡಿಂಡಿಮ, ತಿರುಮಲಾಂಬಾ ಇವರು ವಿಜಯನಗರ ಕಾಲದ ಶ್ರೇಷ್ಠ ಸಂಸ್ಕೃತ ವಿದ್ವಾಂಸರಾಗಿದ್ದರು.

ವಿದ್ಯಾರಣ್ಯರ 'ಜೀವನ್ಮುಕ್ತಿ ವಿವೇಕ', 'ಪಂಚದಶಿ' ಮತ್ತು 'ಪರಾಶರ ಮಾಧವೀಯ', 'ಶಂಕರ ವಿಜಯ' ಮತ್ತು 'ರಾಜಕಾಲ ನಿರ್ಣಯ', ವೇದಾಂತ ದೇಶಿಕರ 'ಮೀಮಾಂಸ ಪಾದುಕಾ' ಹಾಗೂ 'ತಾತ್ಪರ್ಯ ಚಂದ್ರಿಕಾ', ಜಯತೀರ್ಥರ 'ನ್ಯಾಯಸುಧಾ', ವಾದಿರಾಜನ 'ರುಕ್ಮಿಣಿ ವಿಜಯ', ವಿದ್ಯಾರಣ್ಯರ 'ಸಂಗೀತಸಾರ' (ಸಂಗೀತಕ್ಕೆ ಸಂಬಂಧಿಸಿದ ಕೃತಿ), ರಾಮಯ್ಯಮಾತ್ಯನ 'ಸ್ವರಮೇಳ ಕಲಾನಿಧಿ', ಲಕ್ಷ್ಮೀನಾರಾಯಣನ 'ಸಂಗೀತ ಸೂರ್ಯೋದಯ', ಮಾಧವ ಮಂತ್ರಿಯ 'ತಾತ್ಪರ್ಯದೀಪಿಕೆ', ಗಂಗಾದೇವಿಯ 'ಮಧುರಾವಿಜಯಂ' 'ಸಾಳುವಾಭ್ಯುದಯಂ', ಮುಮ್ಮಡಿ ರಾಜನಾಥ ಡಿಂಡಿಮನ 'ಅಚ್ಯುತರಾಯಾಭ್ಯುದಯಂ', ತಿರುಮಲಾಂಬಳ 'ವರದಾಂಬಿಕಾ ಪರಿಣಯಂ', ಅಪ್ಪಯ್ಯ ದೀಕ್ಷಿತರ 'ವೇದಾಂತ ಕಲ್ಪತರು', ಶಿವಸೂರ್ಯನ 'ಪಾಂಡವಾಭ್ಯುದಯ', ವ್ಯಾಸರಾಯರ 'ಚಂದ್ರಿಕಾ ನ್ಯಾಯಾಮೃತ', 'ತರ್ಕತಾಂಡವ', ಜೀದೋಜ್ಜೀವನ ಸಾಯಣಾಚಾರ್ಯನ 'ಆಯುರ್ವೇದ ಸುಧಾನಿಧಿ', 'ಯಜ್ಞತಂತ್ರ ಸುಧಾನಿಧಿ' ಮತ್ತು 'ಪ್ರಾಯಶ್ಚಿತ್ತ ಸುಧಾನಿಧಿ' ಎಂಬ ಸಂಪಾದನ ಕೃತಿಗಳನ್ನು ಹೆಸರಿಸಬಹುದು. ಇಮ್ಮಡಿ ದೇವರಾಯನ 'ಮಹಾನಾಟಕ ಸುಧಾನಿಧಿ', 'ರತಿರತ್ನ ಪ್ರದೀಪಕ' ಎಂಬ ಕೃತಿಗಳು; ಸಾಳುವ ತಿಮ್ಮರಸನ 'ಮನೋಹರ', ವಿಜಯನಗರ ಸಾಮ್ರಾಜ್ಯದ ಪ್ರಸಿದ್ಧ ಅರಸನಾದ ಕೃಷ್ಣದೇವರಾಯನೂ ಸಹ ವಿದ್ವಾಂಸನಾಗಿದ್ದು ಸಂಸ್ಕೃತ ಭಾಷೆಯಲ್ಲಿ 'ಮದಾಲಸ ಚರಿತಂ', 'ರಸಮಂಜರಿ', 'ಉಷಾಪರಿಣಯಂ' ಮತ್ತು 'ಜಾಂಬವತಿ ಕಲ್ಯಾಣಂ' ಎಂಬತಹ ಶ್ರೇಷ್ಠ ಕೃತಿಗಳನ್ನು ರಚಿಸಿದ್ದಾನೆ. ಇವೆಲ್ಲಾ ವಿಜಯನಗರ ಕಾಲದ ಶ್ರೇಷ್ಠ ಸಂಸ್ಕೃತ ಕೃತಿಗಳಾಗಿವೆ.

## ತೆಲುಗು ಸಾಹಿತ್ಯ

ಕೃಷ್ಣದೇವರಾಯನ ಕಾಲವನ್ನು 'ತೆಲುಗು ಸಾಹಿತ್ಯದ ಸುವರ್ಣಯುಗ'ವೆಂದು ಕರೆಯಬಹುದು. ಕೃಷ್ಣದೇವರಾಯನ ಆಸ್ಥಾನದಲ್ಲಿ ಅಷ್ಟದಿಗ್ಗಜರಾಗಿ ಎಂಟು ಜನ ವಿಶ್ವವಿಖ್ಯಾತ ತೆಲುಗು ಪಂಡಿತರು ಮತ್ತು ಕವಿಪುಂಗವರು ಇದ್ದರು.

**ಅಷ್ಟದಿಗ್ಗಜರು :**

೧. ಅಲ್ಲಸಾನಿ ಪೆದ್ದಣ - 'ಮನುಚರಿತಮು' ಎಂಬ ಗ್ರಂಥವನ್ನು ರಚಿಸಿದನು.

೨. ನಂದಿ ತಿಮ್ಮಣ್ಣ- 'ಪಾರಿಜಾತಾಪಹರಣಮು' ಇದೊಂದು ಪ್ರಬಂಧ ಕೃತಿಯಾಗಿದ್ದು, ಇದರಲ್ಲಿ ಕೃಷ್ಣದೇವರಾಯನ ವಂಶಾವಳಿ, ಪ್ರಶಸ್ತಿ, ಪ್ರಶಂಸೆಗಳೊಂದಿಗೆ ರಾಯನ ದಿಗ್ವಿಜಯಗಳ ಸೂಚನೆಯು ಇದೆ.

೩. ಅಯಲರಾಜು ರಾಮಭದ್ರುಡು - 'ರಾಧಾಮಾಧವ'

೪. ದೂರ್ಜತಿ - 'ಕಾಳಹಸ್ತಿ ಶತಕ'

೫. ಪಿಂಗಳ ಸೂರಣ್ಣ - 'ಕಲಾಪೂರ್ಣೋದಯ'

೬. ರಾಮರಾಜ ಭೂಷಣ - 'ವಸುಚರಿತಂ'

೭. ಮಾದಯ್ಯಗಾರಿ ಮಲ್ಲಣ್ಣ - 'ರಾಜಶೇಖರ ಚರಿತಮು'

೮. ತೆನಾಲಿ ರಾಮಕೃಷ್ಣ - ಈತನು ಬಹಳ ಜನಪ್ರಿಯ ಕವಿ, ಕಥೆಗಾರ ಹಾಗೂ ವಿದೂಷಕ (ಹಾಸ್ಯಗಾರ)ನಾಗಿದ್ದು ಹಾಸ್ಯ ಚಕ್ರವರ್ತಿ ಎಂಬ ಬಿರುದನ್ನು ತನ್ನ ಪ್ರಭುವಾದ ಕೃಷ್ಣದೇವರಾಯನಿಂದ ಪಡೆದಿದ್ದನು. ತೆನಾಲಿರಾಮಕೃಷ್ಣನ ಕಥೆಗಳು ಇಂದಿಗೂ ತುಂಬಾ ಜನಪ್ರಿಯವಾಗಿದ್ದು, ಈ ಕವಿಗೆ ಲಕ್ಷ್ಮಿ-ಸರಸ್ವತಿಯರಿಬ್ಬರೂ (ದೇವತೆಗಳು) ಒಲಿದಿದ್ದರೆಂಬ ಪ್ರತೀತಿಯಿದೆ. ಈತನು ತೆಲುಗು ಭಾಷೆಯಲ್ಲಿ 'ಪಾಂಡುರಂಗ ಮಹಾತ್ಮೆ', 'ಘಟಿಕಾಚಲ ಮಹಾತ್ಮ್ಯಂ','ಲಿಂಗಪುರಾಣಂ' ಎಂಬ ಕೃತಿಗಳನ್ನು ರಚಿಸಿದ್ದಾನೆ. ಈತನನ್ನು ವಿಕಟಕವಿ ಎಂದು ಕರೆಯಲಾಗುತ್ತಿತ್ತು.

ಎರಡನೆಯ ದೇವರಾಯನು ಪ್ರಖ್ಯಾತ ತೆಲುಗು ಕವಿ ಶ್ರೀನಾಥನಿಗೆ ಆಶ್ರಯದಾತನಾಗಿದ್ದನು. ಶ್ರೀನಾಥನ 'ಶೃಂಗಾರಾನ್ವೇಷದ', 'ವೇಮನ ಶತಕ' ಎಂಬ ಕಾವ್ಯಗಳು ಆತನ ಕಾವ್ಯ ಪ್ರತಿಭೆಯನ್ನು ನಿರೂಪಿಸುತ್ತದೆ. ಪೀನ ವೀರಭದ್ರನ 'ಜೈಮಿನಿ ಭಾರತ'; ನಂದಿ ಮಲ್ಲಯ್ಯನ 'ವರಾಹ ಪುರಾಣ' ಇವು ಹದಿನೈದನೇ ಶತಮಾನದ ಪ್ರಸಿದ್ಧ ತೆಲುಗು ಕೃತಿಗಳಾಗಿವೆ. ಅಷ್ಟದಿಗ್ಗಜರೆಲ್ಲರೂ ತೆಲುಗು ಕವಿಗಳಾಗಿರದೆ,

ವಿವಿಧ ಭಾಷೆಗಳಿಗೆ ಸೇರಿದ ಪ್ರತಿಭಾನ್ವಿತರಾದ ಎಂಟು ಜನ ಕವಿಗಳಾಗಿದ್ದರು. ಹೀಗೆ ವಿಜಯನಗರ ಸಾಮ್ರಾಜ್ಯದಲ್ಲಿ ಕನ್ನಡ ಮತ್ತು ತೆಲುಗು ಭಾಷೆಗಳು ಅನ್ಯೋನ್ಯ ಸೋದರ ಭಾಷೆಗಳಾಗಿದ್ದು ಪರಸ್ಪರ ಸೌಹಾರ್ದತೆಯಿಂದ ಬೆಳೆದವು.

'ಆಂಧ್ರಭೋಜ'ನೆಂದು ಸ್ತುತಿಸಲ್ಪಟ್ಟ ನೃಪತಿ ಕೃಷ್ಣದೇವರಾಯನು ಸ್ವತಃ ಪ್ರಸಿದ್ಧ ತೆಲುಗು ಕವಿಯಾಗಿದ್ದು, 'ಅಮುಕ್ತ ಮಾಲ್ಯದಾ', (ವಿಷ್ಣು ಚಿತ್ತೀಯಮು) ಎಂಬ ಕಾವ್ಯವನ್ನು ರಚಿಸಿದ್ದಾನೆ. ಇದು ವೈಷ್ಣವ ಅಂಡಾಳ್‌ದೇವಿಯನ್ನು ಕುರಿತು ಬರೆದ ಕೃತಿಯಾಗಿದ್ದು ತೆಲುಗು ಸಾಹಿತ್ಯದ ಮೇರು ಕೃತಿಗಳಲ್ಲೊಂದಾಗಿದೆ.

ವಿಜಯನಗರ ಕಾಲಕ್ಕೆ ಕನ್ನಡ ಸಾಹಿತ್ಯದ ಕೃಷಿ ಉನ್ನತವಾಗಿ ನಡೆದಂತೆ ಸಂಸ್ಕೃತ ಮತ್ತು ತೆಲುಗು ಸಾಹಿತ್ಯಗಳು ಅಭಿವೃದ್ಧಿ ಹೊಂದಿದವು. ಕನ್ನಡ ಸಾಹಿತ್ಯವು ಅಪಾರ ಮುನ್ನಡೆ ಗಳಿಸಿತು. ಈ ಕಾಲದಲ್ಲಿ ಸುಲಭವಾದ 'ದೇಶಿ' ಭಾಷೆಗಿಂತ ಪ್ರೌಢವಾದ 'ಮಾರ್ಗ' ಸಾಹಿತ್ಯಕ್ಕೆ ಪ್ರಾಮುಖ್ಯತೆ ದೊರೆಯಿತು.

## ಮಾರ್ಗಸಾಹಿತ್ಯ

"ಕ್ರಿ.ಶ. ೧೪೦೦ ರಲ್ಲಿ ಆಯತ ವರ್ಮನು ಕನ್ನಡದಲ್ಲಿ 'ರತ್ನ ಕರಂಡಕ' ಎಂಬ ದಾರ್ಶನಿಕ ಗ್ರಂಥವನ್ನು ರಚಿಸಿದನು. ವಿಜಯಣ್ಣನ 'ದ್ವಾದಶಾನುಪೇಕ್ಷೆ' ಎಂಬ ಗ್ರಂಥವೂ ದಾರ್ಶನಿಕ ಗ್ರಂಥವಾಗಿದೆ. ತೋಂಟದ ಸಿದ್ದಲಿಂಗರು ಹಾಗೂ ಗುಮ್ಮಳೂರು ಸಿದ್ದಲಿಂಗ ಜಕ್ಕಣಾಚಾರ್ಯರು ವಚನಗಳನ್ನು ರಚಿಸಿದ್ದಾರೆ. ಇವು ವೀರಶೈವ ಧರ್ಮದ ತತ್ವಗಳನ್ನು ಒಳಗೊಂಡಿವೆ. ಮಧುರನ 'ಧರ್ಮನಾಥ ಪುರಾಣ' (೧೩೮೫), ರತ್ನಾಕರವರ್ಣಿಯ 'ಭರತೇಶ ವೈಭವ' (೧೫೫೭), ಪದ್ಮಣಾಂಕನ 'ಪದ್ಮರಾಜ ಪುರಾಣ' (೧೩೮೫), ಚಾಮರಸನ 'ಪ್ರಭುಲಿಂಗ ಲೀಲೆ' (ಈ ಕೃತಿಯು ಕನ್ನಡ ಸಾಹಿತ್ಯದ ಶ್ರೇಷ್ಠ ಕೃತಿಗಳಲ್ಲಿ ಒಂದು), ನೀಲಕಂಠ ಶಿವಾಚಾರ್ಯನ 'ಆರಾಧ್ಯ ಚರಿತೆ' (೧೪೮೫), ಚೆನ್ನ ಬಸವಾಂಕನ 'ಮಹಾದೇವಿಯಕ್ಕನ ಪುರಾಣ' (೧೫೫೦), ಲಕ್ಕಣ್ಣ ದಂಡೇಶನ 'ಶಿವತತ್ವ ಚಿಂತಾಮಣಿ' (೧೪೨೮), ಗುಬ್ಬಿ ಮಲ್ಲಣಾರ್ಯನ 'ವೀರಶೈವಾಮೃತ ಪುರಾಣ' (೧೫೫೦), ಅಭಿನವ ವಿದ್ಯಾನಂದನ 'ಕಾವ್ಯಸಾರ' (೧೫೫೩) ಗ್ರಂಥಗಳು ಸಾಹಿತ್ಯದ ಉತ್ಕೃಷ್ಟ ಗುಣಗಳನ್ನು ಒಳಗೊಂಡಿವೆ. ಇವುಗಳಲ್ಲಿ ಕೆಲ ಕಾವ್ಯಗಳು ಇತಿಹಾಸದ ಮೇಲೆಯೂ ಬೆಳಕು ಚೆಲ್ಲಿರುವುದುಂಟು."[೭]

ವಿಜಯನಗರ ಕಾಲದ ಕವಿಶ್ರೇಷ್ಠರಲ್ಲಿ ಒಬ್ಬನಾದ ಗದುಗಿನ ನಾರಾಣಪ್ಪ ಅಥವಾ ಕುಮಾರವ್ಯಾಸನು ರಚಿಸಿರುವ 'ಕರ್ಣಾಟ ಭಾರತ ಕಥಾಮಂಜರಿ'ಯು ಕನ್ನಡ ಸಾಹಿತ್ಯದ ಮೇರು ಕೃತಿಗಳಲ್ಲಿ ಒಂದು. ಇದನ್ನು ಕುಮಾರವ್ಯಾಸ ಭಾರತ, ಗದುಗಿನ ಭಾರತ ಎಂತಲೂ ಕರೆಯುತ್ತಾರೆ. ನಾರಾಣಪ್ಪನಿಗೆ ಕುಮಾರವ್ಯಾಸನೆಂಬ ಹೆಸರು ಅನ್ವರ್ಥಕವಾಗಿದೆ. ವ್ಯಾಸನ ಮೇಲೆ ಅಭಿಮಾನವನ್ನು ಹೊಂದಿ ತನ್ನನ್ನು

ಕುಮಾರವ್ಯಾಸ (ವ್ಯಾಸನ ಮಗ)ನೆಂದು ಕರೆದುಕೊಂಡಿದ್ದಾನೆ. ಈ ಕಾವ್ಯ ಮಹಾಭಾರತದ ಕಥೆಯನ್ನು ಒಳಗೊಂಡಿದ್ದು, ಶಕ್ತಿಯುತವಾದ ಭಾಷೆ, ಪಾತ್ರ ಸಂಯೋಜನೆ, ಅದ್ಭುತವಾದ ವಸ್ತುವಿನ್ಯಾಸ, ಹಲವಾರು ಘಟನಾವಳಿಗಳ ಮನಮುಟ್ಟುವ ನಿರೂಪಣೆ, ಅಪೂರ್ವವಾದ ಕಲ್ಪನೆ ಇವು ಕುಮಾರವ್ಯಾಸನ ಕಾವ್ಯದ ಪ್ರಮುಖ ಅಂಶಗಳು.

ದ್ರೌಪದಿಯ ಪಾತ್ರಕ್ಕೆ ಕವಿ ಹೆಚ್ಚು ಆದ್ಯತೆಯನ್ನು ನೀಡಿದ್ದು, ಅಲ್ಲಲ್ಲಿ ಹಾಸ್ಯರಸ ಒಸರುವಂತೆ ಕಥಾ ನಿರೂಪಣೆಯನ್ನು ಮಾಡಿದ್ದಾನೆ. ಮಹಾಭಾರತದ ೧೮ ಪರ್ವಗಳಲ್ಲಿ ೧೦ ಪರ್ವಗಳನ್ನು ಮುಗಿಸಿ ಕವಿ ಕಾಲವಾಗಿರಬಹುದು. ಉಳಿದ ೮ ಪರ್ವಗಳನ್ನು ಕೃಷ್ಣದೇವರಾಯನು ತನ್ನ ಆಸ್ಥಾನ ಕವಿಯಾದ ತಿಮ್ಮಣ್ಣನಿಂದ ಬರೆಸಿ ಕನ್ನಡ ಭಾರತವನ್ನು ಸಮಗ್ರ ಭಾರತವನ್ನಾಗಿಸಿದನೆಂದು ಹೇಳಲಾಗಿದೆ. ಇದು ಸರ್ವ ಒಪ್ಪಿತವಾದ ವಿಚಾರವೂ ಹೌದು.

### ಶತಕ ಸಾಹಿತ್ಯ

ಹರಿಹರನೇ 'ಶತಕ ಸಾಹಿತ್ಯ'ಕ್ಕೆ ಸ್ಫೂರ್ತಿ ಎಂದು ಹೇಳಬಹುದು. ಇವನು 'ಪಂಪಾಶತಕ', 'ರಕ್ಷಾ ಶತಕ'ಗಳನ್ನು ರಚಿಸಿದನು. ಮುಂದೆ ಜೈನ ಕವಿಗಳು ಮತ್ತು ವೀರಶೈವ ಕವಿಗಳು ಶತಕ ಸಾಹಿತ್ಯವನ್ನು ಬೆಳೆಸಿದರು. ಮಧುರ ಕವಿಯ 'ಗುಮ್ಮಟೇಶ್ವರ ಶತಕ', ಚಂದ್ರನ 'ಚೂಡಾಮಣಿ ಶತಕ', ಗುಮ್ಮಟಾಚಾರ್ಯನ 'ಅರ್ಥೇಂದು ಮೌಳಿ ಶತಕ', ರತ್ನಾಕರ ವರ್ಣಿಯ 'ರತ್ನಾಕರಾಧೀಶ್ವರ ಶತಕ'ಗಳು ಬಹು ಪ್ರಮುಖವಾದ ಶತಕ ಕೃತಿಗಳು.

### ದಾಸ ಸಾಹಿತ್ಯ

"ವಿಷ್ಣು ಭಕ್ತರಾದ ದಾಸರ ಕೀರ್ತನೆಗಳು ಕನ್ನಡ ಸಾಹಿತ್ಯದಲ್ಲಿ ಹಾಡುಗಬ್ಬ ಸಾಹಿತ್ಯವಾಗಿ ಪ್ರಚಲಿತದಲ್ಲಿದೆ. ವ್ಯಾಸತೀರ್ಥರಿಂದ ಹಿಡಿದು, ಪುರಂದರದಾಸ, ಕನಕದಾಸರು, ಶ್ರೀಪಾದರಾಯರು, ವಾದಿರಾಜರೇ ಮುಂತಾದ ನೂರಾರು ದಾಸಶ್ರೇಷ್ಠರು ವಿಜಯನಗರ ಸಾಮ್ರಾಜ್ಯದ ಕೀರ್ತನಕಾರರೆನಿಸಿದ್ದರು. ಇವರು ತಮ್ಮ ಕೀರ್ತನೆಗಳಲ್ಲಿ ಜಗತ್ತಿನ ಡಾಂಭಿಕತೆಯನ್ನು ಖಂಡಿಸಿ ಸಮಾಜ ಸುಧಾರಣೆಗೆ ನೈತಿಕತೆ ರೂಪಿಸಿದವರು. ಇಂದಿಗೂ ಪುರಂದರ ಹಾಗೂ ಕನಕದಾಸರ ಕೀರ್ತನೆಗಳು ಜನರ ನಾಲಿಗೆಯ ಮೇಲೆ ಅನುರಣಿತವಾಗುತ್ತಿವೆ. ದಾಸ ಸಾಹಿತ್ಯದ ಅಶ್ವಿನಿ ದೇವತೆಗಳಾದ ಕನಕ-ಪುರಂದರರು ಸಾವಿರಾರು ಭಗವದ್ಭಕ್ತಿ ರಸಭರಿತವಾದ ಕೀರ್ತನೆ, ಮುಂಡಿಗೆಗಳು, ಸುಳಾದಿ, ಉಗಾಭೋಗಗಳನ್ನು ರಚಿಸಿ ಪ್ರೀತಿ, ದಯೆ, ಸತ್ಯ ಹಾಗೂ ಹರಿಪಾರಮ್ಯವನ್ನು ಬೋಧಿಸಿದ್ದಾರೆ. ಕನಕದಾಸರು ಕೇವಲ ಕೀರ್ತನಕಾರರು ಮಾತ್ರವಲ್ಲದೆ, ಹಲವಾರು ಕೃತಿಗಳನ್ನು ಸಹ ರಚಿಸಿದ್ದಾರೆ."[೮]

ಉದಾಹರಣೆಗೆ ರಾಮಧಾನ್ಯ ಚರಿತ್ರೆ, ಹರಿಭಕ್ತಿಸಾರ, ಮೋಹನ ತರಂಗಿಣಿ, ನಳಚರಿತ್ರೆ ಇತ್ಯಾದಿ ಕೃತಿಗಳು.

**ಶಾಸ್ತ್ರ ಸಾಹಿತ್ಯ**

ವಿಜಯನಗರ ಅರಸರ ಕಾಲದಲ್ಲಿ ಕೇವಲ ಕಾವ್ಯಗ್ರಂಥಗಳಷ್ಟೇ ಅಲ್ಲದೆ ಶಾಸ್ತ್ರಗ್ರಂಥಗಳಿಗೂ ಕೊರತೆಯಿರಲಿಲ್ಲ. ಗಣಿತ, ವ್ಯಾಕರಣ, ವೈದ್ಯಶಾಸ್ತ್ರ ಮತ್ತು ನಿಘಂಟುಗಳು ರಚನೆಯಾಗಿವೆ. ಮಂಗರಸನ 'ಖಗೇಂದ್ರ ಮಣಿದರ್ಪಣ'ವು ಒಂದು ವೈದ್ಯಗ್ರಂಥ. ಈಶ್ವರ ಕವಿಯ 'ಕವಿಜಿಹ್ವಾಬಂಧನ', ಬೊಮ್ಮರಸನ 'ಚತುರಾಸ್ಯ ನಿಘಂಟು' - ಇವು ಈ ಕಾಲದ ಪ್ರಮುಖವಾದ ಶಾಸ್ತ್ರ ಗಂಥಗಳು.

**ತಮಿಳು ಸಾಹಿತ್ಯ**

ವಿಜಯನಗರ ಅರಸರ ಕಾಲದಲ್ಲಿ ಸಂಸ್ಕೃತ, ತೆಲುಗು, ಕನ್ನಡ ಸಾಹಿತ್ಯವಲ್ಲದೆ ತಮಿಳು ಸಾಹಿತ್ಯವೂ ರಚನೆಗೊಂಡಿರುವುದನ್ನು ಕಾಣಬಹುದು.

ಉದಾಹರಣೆಗೆ ಹರಿದಾಸರ 'ಇರು ಸಮಯ ವಿಳಿಕ್ಕುಮ್' ಎಂಬ ಕೃತಿಯಲ್ಲಿ ಕೃಷ್ಣದೇವರಾಯನು ವಿಜಯ ಸ್ತಂಭವನ್ನು ನಿಲ್ಲಿಸಿದ ವಿವರಗಳ ನಿರೂಪಣೆಯಿದೆ. ಗ್ರಂಥದ ಪೀಠಿಕೆಯಲ್ಲಿ ಈ ಕೃತಿಯು ಕೃಷ್ಣದೇವರಾಯನ ಕಾಲದಲ್ಲಿ ರಚಿತವಾದುದೆಂದು ಹೇಳಲಾಗಿದೆ. ವೆಳ್ಳಾಳ ವಂಶದ ಜ್ಞಾನಪ್ರಕಾಶನ 'ಮಂಜರಿಪ್ಪು' ಎಂಬ ಕೃತಿಯು ಕೃಷ್ಣದೇವರಾಯನನ್ನು ಸ್ತುತಿಸುವುದಕ್ಕಾಗಿಯೇ ಬರೆದಂತಹ ತಮಿಳು ಕೃತಿ.

ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಕನ್ನಡ, ತೆಲುಗು, ಸಂಸ್ಕೃತ ಮತ್ತು ತಮಿಳು ಕೃತಿಗಳಷ್ಟೇ ಅಲ್ಲದೆ ಮೌಖಿಕ ಸಾಹಿತ್ಯದ ಒಲವು ಇತ್ತು.

ಉದಾಹರಣೆ : ಮೌಖಿಕ ಕಾವ್ಯಗಳು, ಕಥನ ಕಾವ್ಯಗಳು, ತ್ರಿಪದಿಗಳು, ಐತಿಹ್ಯಗಳು, ಗಾದೆಗಳು ಮತ್ತು ಶಿಶು ಪ್ರಾಸಗಳು.

ವಿಜಯನಗರದ ಸಾಹಿತ್ಯ ಕುರಿತು ಇಷ್ಟೇ ಅಲ್ಲದೆ, ಬ್ಯಾರಡಸನ ಕಥಾನಕ, ಪ್ಯಾಸ್ ಮತ್ತು ನೂನಿಜ್‌ರ ದಿನಚರಿಗಳು, ಡೊಮಿಂಗೊ ಪ್ಯಾಸ್‌ನ ಕಥನಗಳು ಬಹುಮುಖ್ಯವಾದ ದಾಖಲೆಗಳಾಗಿವೆ.

**ಬ್ಯಾರಡಸನ ಕಥಾನಕ (೧೬೧೪)**

"ಮೊದಲನೆಯ ರಾಜಾ ವೆಂಕಟನ ಮರಣಾನಂತರ ೧೬೧೪ರಲ್ಲಿ ಚಂದ್ರಗಿರಿಯಲ್ಲಿ ಜರುಗಿದ ಘಟನೆಗಳಿಗೆ ಸಂಬಂಧಿಸಿದ ಟಿಪ್ಪಣಿ ಅತಿ ಸ್ವಾರಸ್ಯಕರವಾಗಿದೆ. ಅದು ಡಿಸೆಂಬರ್ ೧೨ ಕ್ರಿ.ಶ. ೧೬೧೬

ರಂದು ಕೊಚಿನ್‌ನಲ್ಲಿ ಮ್ಯಾನುಯಲ್ ಬ್ಯಾರಡಸ ಬರೆದ ಪತ್ರದ ಅವತರಣಿಕೆಯನ್ನು ಹೊಂದಿದೆ. ಮತ್ತು ಲಿಸ್ಬನ್‌ನ ರಾಷ್ಟ್ರೀಯ ಪತ್ರಾಗಾರದಲ್ಲಿ ಸಂರಕ್ಷಿಸಿ ಇಡಲಾಗಿರುವ ಕಂತೆಯಲ್ಲಿ ಹುಡುಕಿ ತೆಗೆದ ಪತ್ರವನ್ನು ಮೂಲದಿಂದ ನಕಲು ಮಾಡಿ ಕಳಿಸಿಕೊಟ್ಟ ಪತ್ರನನ್ನು ಸದಾನಂದ ಕನವಳ್ಳಿಯವರೆ ಅನುವಾದ ಮಾಡಿರುವರು."[೯]

**ಪ್ಯಾಸ್ ಮತ್ತು ನ್ಯೂನಿಜ್‌ರ ದಿನಚರಿಗಳು-ಪತ್ರಗಳು**

"ಚರಿತ್ರಕಾರ ಬ್ಯಾರೋಸನಿಗೆ ಪತ್ರ ಕ್ರಿ.ಶ. ೧೫೩೭ರ ಸುಮಾರಿಗೆ ಭಾರತದಿಂದ ಪೋರ್ಚುಗಲ್‌ಗೆ ಕಳಿಸಿದ ದಿನಚರಿಗಳೊಂದಿಗೆ ಇದ್ದುದು." ಮೊದಲು ಡೊಮಿಂಗೊ ಪ್ಯಾಸ್‌ನು ಕೃಷ್ಣದೇವರಾಯನ ಕಾಲಕ್ಕೆ ಮೂರು ವರ್ಷಗಳ ವ್ಯಾಪಾರದಲ್ಲಿ ನಿರತನಾಗಿದ್ದ ಫರ್ನಾಒ ನ್ಯೂನಿಜ್‌ನಿಂದ ಪಡೆದುಕೊಂಡಿರುವೆ. ಇನ್ನೊಂದನ್ನು ಡೊಮಿಂಗೊ ಪ್ಯಾಸ್‌ನಿಂದ ಪಡೆದಿರುವೆ. ಇದು ವಿಜಯನಗರಕ್ಕೆ ಹೋದಾಗ ಮಾಡಿದ ಸಾರಾಂಶದ ಕರಡು."[೧೦]

**ಡೊಮಿಂಗೊ ಪ್ಯಾಸ್‌ನ ಕಥನ**

(ಬಹುಶಃ ಕ್ರಿ.ಶ. ೧೫೨೦ ರಿಂದ -೨೧ ರವರೆಗಿನ ಕಾಲದಲ್ಲಿ ಬರೆದುದು)

"(ನರಸಿಂಗನ ರಾಜ್ಯದಲ್ಲಿ ಡೊಮಿಂಗೊ ಪ್ಯಾಸ್ ಕಂಡುಕೊಂಡ ಮತ್ತು ಅರಿತುಕೊಂಡ ಸಂಗತಿಗಳು)"

ಪ್ಯಾಸನು ಮೊದಮೊದಲು ವಿಜಯನಗರ ಸಾಮ್ರಾಜ್ಯಕ್ಕೆ ಹೋಗುವ ಮಾರ್ಗಗಳನ್ನು ಕುರಿತು ಹೇಳಿದ್ದು, ನಂತರ ಇಲ್ಲಿಯ ಪ್ರಾಕೃತಿಕ ವೈಭವ ಜಾನುವಾರುಗಳು, ಬೆಳೆಗಳು, ನಗರಗಳು ಮತ್ತು ಗ್ರಾಮಗಳನ್ನು ಕುರಿತು ಹೇಳುತ್ತಾನೆ.

ಈ ಪ್ರದೇಶದಲ್ಲಿ ಗಾಳಿ ಹೆಚ್ಚು, ಮಳೆ ಕಡಿಮೆ ಮಳೆಯಾದಾಗ ನೀರು ಸಂಗ್ರಹಿಸಲು ಸರೋವರಗಳನ್ನು ನಿರ್ಮಾಣ ಮಾಡಲಾಗಿದೆ. ಇಲ್ಲಿ ಊಟೆಗಳು ಬಹಳ, ಅವುಗಳ ನೀರು ಕೆಂಪಾಗಿದ್ದು ಮಣ್ಣು ಮಿಶ್ರಿತವಾಗಿರುತ್ತದೆ ಎಂಬುದನ್ನು ಹೇಳುತ್ತಾನೆ. ಈ ನಾಡಿನಲ್ಲಿ ಎತ್ತುಗಳು, ಆಕಳುಗಳು ಬಹಳ. ಅವುಗಳನ್ನು ಇವರು ಕೊಲ್ಲುವುದಿಲ್ಲ. ಆಕಳುಗಳನ್ನು ಪೂಜಿಸುತ್ತಾರೆ. ಇಲ್ಲಿಯ ರಾಜನಿಗೆ ಎಷ್ಟು ಜನ ಬೇಕಾದರೂ ಪತ್ನಿಯರಿರಬಹುದು. ಕೃಷ್ಣದೇವರಾಯನಿಗೆ ಇಬ್ಬರು ಮುಖ್ಯ ಪತ್ನಿಯರೊಂದಿಗೆ ವಾರಾಂಗನೆಯು ಉಪಪತ್ನಿಯಾಗಿದ್ದು, ಅವನು ರಾಜನಾದರೆ ತನ್ನನ್ನು ಪತ್ನಿಯಾಗಿ ಸ್ವೀಕರಿಸುವಂತೆ ಅವಳು ರಾಜನಿಂದ ವಚನವನ್ನು ಪಡೆದಿದ್ದಳು. ಹೀಗಾಗಿ ವಾರಾಂಗನೆ ರಾಜನ ಪತ್ನಿಯಾದಳು. ಪ್ರತಿಯೊಬ್ಬ ಪತ್ನಿಯರಿಗೂ ಆಪ್ತ ಸೇವಕಿಯರು, ಪರಿಚಾರಿಕೆಯರು ಹಾಗೂ ಕಾವಲುಗಾರ್ತಿಯರು ಇರುತ್ತಾರೆ. ರಾಜಧಾನಿಯಲ್ಲಿ ಕತ್ತಿ ಗುರಾಣಿ ಹಿಡಿಯುವ ಸ್ತ್ರೀಯರು, ಕುಸ್ತಿಯಾಡುವ ಸ್ತ್ರೀಯರು, ಕಹಳೆ ಊದುವ ಸ್ತ್ರೀಯರು, ಕೊಳಲೂದುವ

ಸ್ತ್ರೀಯರು ಹೀಗೆ ಭಿನ್ನ ಭಿನ್ನ ವಾದ್ಯಗಳನ್ನು ನುಡಿಸುವ ಸ್ತ್ರೀಯರೊಂದಿಗೆ ಬೋಯಿಗಳಾಗಿ, ಅಗಸರಾಗಿ, ದ್ವಾರಪಾಲಕರಾಗಿ ಕಾರ್ಯನಿರ್ವಹಿಸುವ ಪ್ರತಿಭಾವಂತ ಸ್ತ್ರೀಯರು ರಾಜ್ಯದಲ್ಲಿದ್ದರು.

ಪ್ಯಾಸ್‌ನು ಈ ನಾಡಿನ ಕತ್ತೆಗಳನ್ನು ಕುರಿತು ಹೇಳುತ್ತ, ಈ ನಾಡಿನ "ಕತ್ತೆಗಳು ಬಹಳ ಚಿಕ್ಕವು ಅವುಗಳನ್ನು ಚಿಕ್ಕ ಕೆಲಸಗಳಿಗಾಗಿ ಬಳಸಿಕೊಳ್ಳಲಾಗುವುದು. ಬಟ್ಟೆ ಒಗೆಯುವವರು ಕತ್ತೆಗಳ ಮೇಲೆ ಬಟ್ಟೆಗಳನ್ನು ಹೇರುತ್ತಾರೆ"[೧೧] ಎಂಬ ಹಿಂದಿನ ವಾಸ್ತವ ಸಂಗತಿಯನ್ನು ನಿರೂಪಿಸುತ್ತಾನೆ. ನಿಜವಾಗಿ ಅಗಸರು ಕತ್ತೆಗಳ ಮೇಲೆ ಬಟ್ಟೆಗಳನ್ನು ಹೇರಿಕೊಂಡು ಹೋಗುವುದು ಸಮಾಜದ ಜೀವಂತ ಚಿತ್ರಣ. (ಆದರೆ ಇಂದು ಅಗಸರು ಕತ್ತೆಗಳನ್ನು ಮನೆಯಿಂದ ಆಚೆ ಓಡಿಸಿದ್ದಾರೆ.)

ಪ್ಯಾಸ್ ಹೇಳುವ ಮಾಹಿತಿಗಳು ರಾಜನ ಭೋಗ ಜೀವನದ ವರ್ಣನೆ ಎನ್ನಬಹುದು. ರಾಜನು ಅರಮನೆಯಲ್ಲಿ ತನಗೆ ತನ್ನ ಪತ್ನಿಯರಲ್ಲೊಬ್ಬಳ ಸಹವಾಸಬೇಕೆನಿಸಿದಾಗ ಒಬ್ಬ ನಪುಂಸಕನಿಗೆ ಅವಳನ್ನು ಕರೆತರಲು ಆಜ್ಞೆ ಮಾಡುತ್ತಾನೆ. ರಾಜನ ಆಜ್ಞಾನುವರ್ತಿಯಾದ ಈ ನಪುಂಸಕನು ರಾಜನಿಂದ ಹೆಚ್ಚಿನ ಸಂಬಳವನ್ನು ಪಡೆಯುತ್ತಾನೆ.

ಒಂದು ಕೆರೆ ನಿರ್ಮಾಣದ ಕಾರ್ಯವನ್ನು ಕುರಿತು ಪ್ಯಾಸನು ಹೇಳುವ ಕಥನವು ತುಂಬಾ ಮಾರ್ಮಿಕವಾಗಿದೆ. ಇಲ್ಲಿಯ ರಾಜ ಒಂದು ಕೆರೆಯನ್ನು ನಿರ್ಮಿಸಲೋಸುಗ ಅದು ವ್ಯಾಪಿಸಿರುವ ನೆಲವನ್ನು ಆವರಿಸಿರುವ ಗುಡ್ಡವನ್ನು ಒಡೆಸಿದ ಕೆರೆಯಲ್ಲಿ ಎಷ್ಟೊಂದು ಕೆಲಸಗಾರರನ್ನು ಪ್ಯಾಸನು ಕಂಡನೆಂದರೆ "ಅವರು ಹದಿನೈದು ಅಥವಾ ಇಪ್ಪತ್ತು ಸಾವಿರ ಇದ್ದರು. ಈ ಕೆಲಸಗಾರರು ದೂರದಿಂದ ಇರುವೆಗಳಂತೆ ಕಾಣುತ್ತಿದ್ದು ಅವರು ಓಡಾಡುವ ನೆಲವೇ ಕಾಣುತ್ತಿರಲಿಲ್ಲ ಅಷ್ಟು ಸಂಖ್ಯೆಯ ಜನರಿದ್ದರು."[೧೨]

ಈ ಕೆರೆ ನೀರನ್ನು ಸಮೃದ್ಧವಾಗಿ ಬಳಸಿಕೊಂಡು ರಾಜ್ಯದ ಜನತೆ ಒಳ್ಳೆಯ ಬೆಳೆಯನ್ನು ಬೆಳೆದು ಆರ್ಥಿಕವಾಗಿ ಸಮೃದ್ಧವಾಯಿತು. ಪ್ರತಿಯೊಬ್ಬ ಸ್ತ್ರೀ, ಪುರುಷರು ದುಡಿಯುತ್ತಿದ್ದು ರಾಜ್ಯದಲ್ಲಿ ಬಡತನವೇ ಇರಲಿಲ್ಲ ಎಂದು ತಿಳಿದುಬರುವುದು.

ರಾಜನ ವ್ಯಕ್ತಿತ್ವವನ್ನು ಕುರಿತು ಪ್ಯಾಸ್‌ನು ವರ್ಣಿಸುವ ಪರಿ ಹೀಗಿದೆ. "ರಾಜನು ಸಾಧಾರಣ ಎತ್ತರ ಒಳ್ಳೆಯ ಮೈ ಬಣ್ಣದವನು ಮತ್ತು ಒಳ್ಳೆಯ ಮೈಕಟ್ಟಿನವನು, ತೆಳ್ಳಗಿರುವುದಕ್ಕಿಂತ ದಪ್ಪವೇ ಇದ್ದಾನೆ. ಅವನ ಮುಖದ ಮೇಲೆ, ಮೈಲಿ ಕಲೆಗಳಿವೆ. ಅವನು ಅತ್ಯಂತ ಭಯ-ಭಕ್ತಿ ಇಡಲ್ಪಟ್ಟವನು ಮತ್ತು ಗೆಲುವಿನ ಸ್ವಭಾವದವನು, ಆನಂದಭರಿತನು ಇದ್ದು, ಪರಿಪೂರ್ಣ ರಾಜನಾಗಿದ್ದನು. ವಿದೇಶಿಯರನ್ನು ಗೌರವಿಸುವವನು, ಅವರನ್ನು ಪ್ರೀತಿಯಿಂದ ಬರಮಾಡಿಕೊಳ್ಳುವವನು ಆಗಿದ್ದು, ನ್ಯಾಯಪರನು. ಆದರೆ ಥಟ್ಟನೆ ಕೋಪಾವೇಶಕ್ಕೆ ಒಳಗಾಗುವವನು ಆಗಿದ್ದಾನೆ. "ಕ್ರಿಸ್ನರಾವ್ ರಾಜಾಧಿರಾಜ ಭಾರತದ ಮಹಾಪ್ರಭುಗಳ ಪ್ರಭು, ಮೂರು ಸಾಗರಗಳ ಮೂರು ಲೋಕಗಳ ಗಂಡ ಇವು ಅವನ ಬಿರುದುಗಳು. ಏಕೆಂದರೆ

ಅವನಲ್ಲಿರುವ ಸೈನ್ಯಗಳು ಮತ್ತು ಪ್ರದೇಶಗಳ ಕಾರಣದಿಂದಾಗಿ ಅವನು ಇತರರಿಗಿಂತಲೂ ಪದವಿಯಲ್ಲಿ ಶ್ರೇಷ್ಠನು. ಆದರೆ ಈ ರಾಜ ಸದಾ ಯುದ್ಧದಲ್ಲಿ ತೊಡಗಿರುತ್ತಾನೆ. ಅನೇಕ ನಗರ ರಾಜ್ಯಗಳನ್ನು ವಶಪಡಿಸಿಕೊಳ್ಳುತ್ತ, ಓರಿಯಾ ರಾಜ್ಯವನ್ನು ಪ್ರವೇಶಿಸಿದ. ಅನೇಕ ಆನೆಗಳನ್ನು, ಸೈನಿಕರನ್ನು ಹೊಡೆದು ಓಡಿಸಿದ ರಾಜನ ಮಗನನ್ನು ಸೆರೆಹಿಡಿದು ವಿಜಯನಗರ ಸಾಮ್ರಾಜ್ಯದಲ್ಲಿ ದೀರ್ಘಕಾಲದವರೆಗೆ ಬಂಧನದಲ್ಲಿರಿಸಿದ ಅವನು ಅಲ್ಲಿಯೇ ಸತ್ತ. ಅವನೊಂದಿಗೆ ಒಪ್ಪಂದ ಮಾಡಿಕೊಂಡ ಓರಿಯಾದ ರಾಜ ಮಗಳನ್ನು ಕೊಟ್ಟು ಮದುವೆ ಮಾಡಿದ."[೧೩]

ಈ ರೀತಿಯಾಗಿ ವಿಜಯನಗರ ಸಾಮ್ರಾಜ್ಯದ ಹಲವಾರು ವಿವರಗಳನ್ನು ಕುರಿತು ಸ್ವತಃ ತಾನು ಕಂಡು ಅರಿತ ವಾಸ್ತವ ಸಂಗತಿಗಳನ್ನು ಡೊಮಿಂಗೊ ಪ್ಯಾಸನು ತನ್ನ ಕಥನಗಳಲ್ಲಿ ನಿರೂಪಿಸಿದ್ದಾನೆ. ಪ್ಯಾಸ್‌ನು ತಿಳಿಸಿರುವಂತೆ ವಿಜಯನಗರ ಸಾಮ್ರಾಜ್ಯವು ಸುಭಿಕ್ಷವಾಗಿದ್ದು, ಆರ್ಥಿಕವಾಗಿ ಸ್ವಾವಲಂಬಿಯಾಗಿತ್ತು.

ರಾಜ್ಯದಲ್ಲಿ ಕನ್ನಡ, ತೆಲುಗು, ಸಂಸ್ಕೃತ, ತಮಿಳು ಇತ್ಯಾದಿ ಭಾಷೆಗಳನ್ನರಿತ ವಿದ್ವಾಂಸರಿದ್ದರು. ದಾಸ ಸಾಹಿತ್ಯ, ಶತಕ ಸಾಹಿತ್ಯ, ಶಾಸ್ತ್ರ ಸಾಹಿತ್ಯ, ಮಾರ್ಗ ಸಾಹಿತ್ಯದ ಕೃತಿಗಳು ನಿರ್ಮಾಣಗೊಂಡಿದ್ದು, ಶಾಸನಗಳು ಹಾಗೂ ವಿದೇಶಿ ವ್ಯಕ್ತಿಗಳ ಬರವಣಿಗೆಗಳು, ದಿನಚರಿಗಳು ಆ ಕಾಲದ ಇತಿಹಾಸ ಅಧ್ಯಯನಕ್ಕೆ ಮುಖ್ಯ ಆಕರಗಳಾಗಿವೆ.

*** ವಿಜಯನಗರ ಸಾಮ್ರಾಜ್ಯದ ರಾಜಕಾರಣದ ವಿವರಗಳು**

"ಕ್ರಿ.ಶ. ೧೩೩೬ ರಲ್ಲಿ ಇಂಗ್ಲೇಂಡಿನ ಎಡ್ವರ್ಡ್‌ನ ಆಳ್ವಿಕೆಯ ಕಾಲದಲ್ಲಿ ಭಾರತದಲ್ಲೊಂದು ಘಟನೆ ಜರುಗಿತು. ಅದು ತತ್‌ಕ್ಷಣ ಇಡೀ ದಕ್ಷಿಣದ ರಾಜಕೀಯ ಸ್ಥಿತಿಯನ್ನು ಬದಲಿಸಿತು. ಆ ದಿನಾಂಕದೊಂದಿಗೆ ಆ ಪ್ರದೇಶದ ಪ್ರಾಚೀನ ಇತಿಹಾಸ ಕೊನೆಗೊಂಡು ಆಧುನಿಕ ಇತಿಹಾಸ ಆರಂಭವಾಯಿತು. ಅದೊಂದು ಹಳತಿನಿಂದ ಹೊಸತಿಗೆ ತಿರುಗುವ ಸಂಕ್ರಮಣಯುಗ."[೧೪]

"ವಿಜಯನಗರದ ಸ್ಥಾಪನೆ ೧೩೩೬ರಲ್ಲಾದರೂ ಅದು ತನ್ನ ಸ್ವತಂತ್ರ ಆಳ್ವಿಕೆಯನ್ನು ಪ್ರಾರಂಭಿಸಿದುದು ಕ್ರಿ.ಶ. ಸುಮಾರು ೧೩೫೬ರ ನಂತರ. ಮೊದಲನೆಯ ಅರಸನೆಂದರೆ ಒಂದನೆ ಬುಕ್ಕರಾಯ. ಈತನು ವಿಜಯನಗರವನ್ನು ಆಳಿದ ಸಂಗಮ ವಂಶದವನು. ಈತನು ಸ್ವತಂತ್ರವಾಗಿ ಬಿರುದುಗಳನ್ನು ಧರಿಸಿದುದು ಶಾಸನಗಳಿಂದ ತಿಳಿದು ಬರುವುದು. ಇತರ ಮೂರು ವಂಶಗಳೆಂದರೆ ಸಾಳ್ವ, ತುಳುವ ಮತ್ತು ಅರವೀಡು. ಎರಡನೇ ದೇವರಾಯ, ಶ್ರೀಕೃಷ್ಣದೇವರಾಯ, ಅಚ್ಚುತರಾಯ ಹಾಗೂ ಸದಾಶಿವರಾಯನ ಕಾಲದಲ್ಲಿ ರಾಜಪ್ರತಿನಿಧಿಯಾಗಿ ಅನಂತರ ಸ್ವತಂತ್ರವಾಗಿ ಆಳ್ವಿಕೆ ನಡೆಸಿದ ರಾಮರಾಯ ಇವರು ಈ ಮನೆತನಗಳ ಪ್ರಸಿದ್ಧ ಅರಸರು. ಇವರು ಉತ್ತಮ ಆಡಳಿತ ನಡೆಸುವುದರ ಜೊತೆಗೆ ಸಾಮಾಜಿಕವಾಗಿ, ರಾಜಕೀಯವಾಗಿ,

ಸಾಂಸ್ಕೃತಿಕವಾಗಿ ಹಲವು ಸುಧಾರಣೆಗಳನ್ನು ಮಾಡಿದರು ಹಾಗೂ ಅನೇಕ ಪ್ರಜಾಹಿತ ಕಾರ್ಯಗಳನ್ನು ಮಾಡಿದರು."[೧೫]

ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ವಿಜಯನಗರದ ಅರಸರು ನೀಡಿದ ಪ್ರೋತ್ಸಾಹವನ್ನು ಕುರಿತು ವಿವರವಾಗಿ ದಾಖಲಿಸಲಾಗಿದೆ. ಅದರಲ್ಲೂ ವಿಜಯನಗರ ಸಾಮ್ರಾಜ್ಯದ ರಾಜಧಾನಿ 'ಹಂಪೆ'ಯಲ್ಲಿ ನಿರ್ಮಿತವಾದ ದೇವಾಲಯಗಳು, ಕಟ್ಟಡಗಳು, ತೇರುಬೀದಿಗಳು ಅಥವಾ ಬಜಾರುಗಳಲ್ಲಿರುವ ಸಾಲುಮಂಟಪಗಳು ಅಂದಿನ ಸಾಮ್ರಾಜ್ಯದ ಚಿತ್ರಣವನ್ನು ಕಟ್ಟಿಕೊಡುತ್ತವೆ. ಅರಸರು ಈ ಮಹಾಕಟ್ಟಡಗಳ ನಿರ್ಮಾಣ ಕಾರ್ಯದಲ್ಲಿ ಆಸಕ್ತರಾಗಿದ್ದರು ಎಂಬುದಕ್ಕೆ ನಿದರ್ಶನವೆನಿಸಿದೆ.

"ವಿಜಯಗರವು ಆನಂತರದ ದೊರೆಗಳ ರಾಜಧಾನಿಯಾಗಿತ್ತು. ಆದರೆ ವಿಜಯನಗರದ ಉದಯಕ್ಕೂ ಮೊದಲೇ ಇದ್ದ ಆನೆಗೊಂದಿಯು ಬಹಳ ಹಿಂದಿನಿಂದಲೂ ರಾಯರ ರಾಜಧಾನಿಯಾಗಿ ಮೆರೆದಿತ್ತು. ಚರಿತ್ರೆಯ ಆರಂಭದ ಕಾಲದಲ್ಲಿ ಆನೆಗೊಂದಿಯು ಸಾಕಷ್ಟು ಔನ್ನತ್ಯದಲ್ಲಿದ್ದು ತನ್ನ ಪ್ರಭಾವ ಅಧಿಕಾರವನ್ನು ಬೆಳೆಸಿಕೊಂಡಿರುವುದಾಗಿ ತೋರುತ್ತದೆ. ಮತ್ತು ಅದನ್ನು ಆಳುತ್ತಿದ್ದಂತಹ ನಾಯಕರು ಸಾಕಷ್ಟು ಸಂಪನ್ಮೂಲಗಳನ್ನು ಹೊಂದಿದ್ದು ಆರಂಭದಲ್ಲಿದ್ದ ಮಹಮ್ಮದೀಯ ದೊರೆಗಳ ಸಹಾಯವನ್ನು ಕೋರಿದ್ದರೆಂದು ತಿಳಿದುಬರುತ್ತದೆ."[೧೬]

ವಿಜಯನಗರದ ರಾಜರುಗಳು ತಮ್ಮ ಆಳ್ವಿಕೆಯ ಕಾಲದಲ್ಲಿ ಅನೇಕ ಜನೋಪಯೋಗಿ ಕೆಲಸಗಳನ್ನು ಮಾಡಿದ್ದಾರೆ. ಅಂದರೆ ಅವುಗಳಲ್ಲಿ ಪಟ್ಟಣ, ಗ್ರಾಮಗಳು, ಮಹಾನಗರಗಳ ನಿರ್ಮಾಣ, ಕೋಟೆ, ಕೊತ್ತಳಗಳು, ದೇವಾಲಯಗಳು, ಕಾಲುವೆ, ಕೆರೆಗಳ ನಿರ್ಮಾಣ ಜಲಾಶಯ ಮತ್ತು ಸೇತುವೆಗಳ ನಿರ್ಮಾಣ ಕಾಮಗಾರಿಗಳು ಸೇರುತ್ತವೆ. ಇದರಿಂದ ಚಕ್ರಾಧಿಪತಿಗಳ ಸಾಮರ್ಥ್ಯ ಮತ್ತು ಅವರು ಕಟ್ಟಡಗಳನ್ನು ನಿರ್ಮಿಸಿದ ಕಾಲದ ಬಗ್ಗೆ ತಿಳಿದು ಬರುವುದು. ಪರಕೀಯರ ದಬ್ಬಾಳಿಕೆಯನ್ನು ತಡೆದು ಹಿಂದೂಧರ್ಮ ಹಾಗೂ ಸಂಸ್ಕೃತಿಯ ರಕ್ಷಣೆಗಾಗಿಯೇ ಉದಯಿಸಿದ ವಿಜಯನಗರ ಸಾಮ್ರಾಜ್ಯವು ಸ್ವಾಭಾವಿಕವಾಗಿಯೇ ಸೈನಿಕ ಶಕ್ತಿ ಪ್ರಧಾನವಾದ ರಾಜ್ಯ (Military State)ವಾಗಿತ್ತು ಎಂಬುದು ವಿಶೇಷ ಗಮನಾರ್ಹ ಸಂಗತಿ.

ವಿಜಯನಗರ ಸಾಮ್ರಾಟರು ತಮ್ಮ ಸಾಮ್ರಾಜ್ಯದ ಚಿಕ್ಕ-ಪುಟ್ಟ ನಾಯಕರನ್ನು ಪಾಳೆಯಗಾರರನ್ನು ಪದಚ್ಯುತಗೊಳಿಸದೆ ಅವರ ಸ್ಥಾನಿಕ ಆಡಳಿತ ಹಕ್ಕುಗಳನ್ನು ಮನ್ನಿಸಿದರು. ಅಂತಹ ಸಣ್ಣ-ಪುಟ್ಟ ಅರಸರು ರಾಜ್ಯದ ಸಾಮ್ರಾಟನಿಗೆ ಸದಾ ವಿಧೇಯರಾಗಿರುತ್ತಿದ್ದರು. ಈ ಸಾಮ್ರಾಜ್ಯದ ಅರಸರು ಪ್ರಪಂಚ ದಿಗ್ವಿಜಯಗಳಾಗಿದ್ದಂತೆ ಚತುರ ಆಡಳಿತಜ್ಞರು ಆಗಿದ್ದರು. ಪ್ರಜೆಗಳ ಕ್ಷೇಮದಲ್ಲಿ ತಮ್ಮ ಅಭ್ಯುದಯವನ್ನು ಕಾಣುವ ಉದಾತ್ತ ಧ್ಯೇಯ ಅವರದಾಗಿತ್ತು. ವಂಶ ಪಾರಂಪರ್ಯವಾದ ರಾಜಪ್ರಭುತ್ವವು ಅಸ್ತಿತ್ವದಲ್ಲಿದ್ದಿತು.

"ರಾಜ್ಯದ ಸರ್ವೋಚ್ಛ ಅಧಿಕಾರಿ ಅರಸನಾಗಿದ್ದನು. ಅರಸೊತ್ತಿಗೆ ವಂಶಪಾರಂಪರ್ಯವಾಗಿ ಬಂದಿದ್ದು ಅದು ಹಿರಿಯ ಪುತ್ರನಿಗೆ ಪ್ರಾಪ್ತವಾಗಬೇಕಿದ್ದಿತು. ಅರಸನ ಅಧಿಕಾರರೋಹಣ ಪಟ್ಟಾಭಿಷೇಕ ಮಹೋತ್ಸವದಿಂದ ವಿಧಿವತ್ತಾಗಿ ಪ್ರಾರಂಭವಾಗುತ್ತಿತ್ತು. ಈ ಮಹೋತ್ಸವದಲ್ಲಿ ಸಾಮಂತರು ಹಾಗೂ ರಾಜ್ಯದ ಮುಖಂಡರು ಭಾಗವಹಿಸಿ ಶುಭ ಹಾರೈಸುತ್ತಿದ್ದರಲ್ಲದೆ, ಅರಸನಿಗೆ ವಿಧೇಯತೆ ಹಾಗೂ ನಿಷ್ಠೆಯನ್ನು ವ್ಯಕ್ತಪಡಿಸುತ್ತಿದ್ದರು. ಅರಸನ ಜವಾಬ್ದಾರಿಗಳು ವೈವಿಧ್ಯಮಯವಾದವುಗಳಾಗಿದ್ದವು. ಎಲ್ಲ ಅಧಿಕಾರಗಳು ಅವನಲ್ಲಿದ್ದಾಗಲೂ ಜನತೆಯ ಹಿತದೃಷ್ಟಿಯನ್ನು ಇಟ್ಟುಕೊಂಡೆ ಆಡಳಿತ ನಡೆಸಬೇಕಿತ್ತು."[೧೭]

ವಿಜಯನಗರದ ಅರಸರು ನಿರಂಕುಶ ಪ್ರಭುಗಳಾಗಿದ್ದರೂ ಧರ್ಮ ಸಮ್ಮತವಾಗಿ ಆಳಿದರು. ದೊರೆಯು ಧರ್ಮವನ್ನು ಸದಾ ಗಮನದಲ್ಲಿಟ್ಟುಕೊಂಡು ರಾಜ್ಯಭಾರ ಮಾಡಬೇಕೆಂದು ಶ್ರೀ ಕೃಷ್ಣದೇವರಾಯನು ತನ್ನ ಅಮುಕ್ತ ಮಾಲ್ಯದ ಎಂಬ ತೆಲುಗು ಕಾವ್ಯಕೃತಿಯಲ್ಲಿ ಹೇಳಿರುವನು. ರಾಜನಿಗೆ ದುಷ್ಟರನ್ನು ಶಿಕ್ಷಿಸುವ, ಶಿಷ್ಟರನ್ನು ರಕ್ಷಿಸುವ ಅಧಿಕಾರವಿತ್ತು. ಈ ಕಾರ್ಯದಲ್ಲಿ ಬಹಳ ಎಚ್ಚರಿಕೆ ವಹಿಸಬೇಕು. ನಿರ್ಲಕ್ಷ್ಯ ಅಥವಾ ಅಜಾಗರೂಕತೆ ಇರಬಾರದೆಂದು ಈ ಕೃತಿಯಲ್ಲಿ ತಿಳಿಸಿದ್ದಾನೆ.

"ಅರಸನಿಗೆ ಸಲಹೆ ನೀಡಲು ಮಂತ್ರಿಮಂಡಲವಿತ್ತು. ದೊರೆಯು ಕಾರ್ಯಾಂಗ, ನ್ಯಾಯಾಂಗ ಹಾಗೂ ಸೈನ್ಯದ ಮುಖ್ಯಸ್ಥನಾಗಿದ್ದನು. ಆತನ ಆಜ್ಞೆಗಳು ಕಾನೂನುಗಳಾಗಿದ್ದವು. ದೊರೆಯು ಆಡಳಿತದ ಕೇಂದ್ರಶಕ್ತಿಯಾಗಿದ್ದನು. ವಿಜಯನಗರದ ದೊರೆಗಳು ಪ್ರಜಾಹಿತ ತತ್ಪರರಾಗಿದ್ದರು. ವೈಭವೋಪೇತವಾದ ಅರಮನೆ, ಸರದಾರರು, ಮಂತ್ರಿಗಳು, ವಿದ್ವಾಂಸರು, ಕಲಾವಿದರು, ಜ್ಯೋತಿಷಿಗಳು ಮತ್ತು ಸಂಗೀತಗಾರರು ಆಸ್ಥಾನವನ್ನು ಅಲಂಕರಿಸಿದ್ದರು. ದೀಪಾವಳಿ ಮಹಾನವಮಿ (ದಸರಾ) ಮತ್ತು ಹೋಳಿಹಬ್ಬಗಳನ್ನು ಬಹಳ ವೈಭವದಿಂದ ಹಾಗೂ ಉತ್ಸಾಹದಿಂದ ಆಚರಿಸುತ್ತಿದ್ದರು."[೧೮]

ದಸರಾ ಹಬ್ಬದ ಉತ್ಸವವು ಮೊದಲಿಗೆ ಪ್ರಾರಂಭವಾದದು ವಿಜಯನಗರ ಸಾಮ್ರಾಜ್ಯದ ಅರಸರಿಂದಲೇ. ನಂತರ ಆ ಹಬ್ಬವು ಮೈಸೂರು ಅರಸರ ಗಮನ ಸೆಳೆಯಿತು. ಈಗ ಮೈಸೂರು ಅರಸರು ಆಚರಿಸುವ ದಸರಾ ಉತ್ಸವದ ಮೂಲ ವಿಜಯನಗರ ಸಾಮ್ರಾಜ್ಯದಲ್ಲಿತ್ತು. ಹಂಪೆಯಲ್ಲಿಯ ಸ್ಮಾರಕಗಳಲ್ಲಿ ಒಂದಾದ ಮಹಾನವಮಿ ದಿಬ್ಬವನ್ನು ಗಮನಿಸಿದಾಗ ಮಹಾನವಮಿ (ನವರಾತ್ರಿ) ಉತ್ಸವವು ಎಷ್ಟು ವಿಜೃಂಭಣೆಯಿಂದ ನಡೆಯುತ್ತಿದ್ದಿರಬೇಕೆಂದು ಕಲ್ಪಿಸಿಕೊಳ್ಳಲು ಸಾಧ್ಯವಾಗುವುದು. ಶ್ರೀ ಕೃಷ್ಣದೇವರಾಯನ ಕಾಲಕ್ಕೆ ವಿಜಯನಗರ ಸಾಮ್ರಾಜ್ಯದ ಆಡಳಿತ ವ್ಯವಸ್ಥೆ ಮತ್ತು ರಾಜಕೀಯ ಸ್ಥಿತಿಗತಿಗಳು ತುಂಬಾ ಸುಸ್ಥಿತಿಯಲ್ಲಿದ್ದವು.

"ಪೋರ್ಚುಗೀಸರಿಗೆ ಎಂದಿಗೂ 'ನರಸಿಂಗನ ರಾಜ್ಯ'ವೆಂದೇ ಪರಿಚಿತವಿದ್ದ ವಿಜಯನಗರದ ಪ್ರದೇಶಗಳ ಬಗೆಗೆ ಹೇಳುತ್ತಾ ಬಾರ್ಬೋಸಾ ಹೀಗೆ ಬರೆಯುತ್ತಾನೆ. "ಅದು ಬಹಳ ಶ್ರೀಮಂತವಾಗಿದೆ,

ಆಹಾರ ಧಾನ್ಯಗಳಿಂದ ಸಮೃದ್ಧವಾಗಿದೆ ಮತ್ತು ನಗರಗಳು ಹಾಗೂ ದೊಡ್ಡ ಪಟ್ಟಣಗಳಿಂದ ತುಂಬಿದೆ"[೧೯] ಎಂದಿದ್ದಾನೆ. ನ್ಯೂನಿಜ್‌ನು ಸಹ ಸಾಮ್ರಾಜ್ಯವನ್ನು ಪ್ರಾಂತಾಧಿಪತ್ಯದಲ್ಲಿ ವಿಭಜಿಸಲಾಗಿತ್ತೆಂದು ಹೇಳುತ್ತಾನೆ.

"ವಿಜಯನಗರ ಸಾಮ್ರಾಜ್ಯದಲ್ಲಿ ಹಿಂದೂ ಧರ್ಮವಲ್ಲದೆ ಜೈನ, ಇಸ್ಲಾಂ ಇತ್ಯಾದಿ ಧರ್ಮಗಳಿಗೂ ಮನ್ನಣೆ ನೀಡಬೇಕಾಗಿತ್ತು. ಇದರಿಂದ ರಾಜನು ತನ್ನ ಮನಬಂದಂತೆ ಆಡಳಿತದಲ್ಲಿ ತೀರ್ಮಾನಗಳನ್ನು ಕೈಕೊಳ್ಳುವುದಾಗುತ್ತಿರಲಿಲ್ಲ. ರಾಜನು ಸಾಮಂತರ ಹಾಗೂ ಪಾಳೆಯಗಾರರ ನೆರವನ್ನು ಪಡೆಯುತ್ತಿದ್ದ. ತಮ್ಮ ಪಾಳೆಯಪಟ್ಟುಗಳಲ್ಲಿ ಸ್ವತಂತ್ರವಾಗಿ ಆಳುವ ಅಧಿಕಾರವುಳ್ಳ ಆ ಪಾಳೆಯಗಾರರು ನಾಯಕರು ರಾಜರಿಗೆ ಆಗಿಂದ್ದಾಗ್ಗೆ ಕಪ್ಪ-ಕಾಣಿಕೆಗಳನ್ನು ಸೈನ್ಯಸಹಾಯವನ್ನು ಸಲ್ಲಿಸಬೇಕಾಗಿತ್ತು. ರಾಜನ ಆಡಳಿತದಲ್ಲಿ ಪ್ರಧಾನರು, ಮಂತ್ರಿಗಳು, ಇತರ ಅಧಿಕಾರಿಗಳು ಪ್ರಭಾವಶಾಲಿಗಳಾಗಿದ್ದರು."[೨೦]

"ಸಾಮ್ರಾಜ್ಯವನ್ನು ರಾಜ್ಯ, ಮಂಡಲ, ಪ್ರಾಂತ್ಯ, ನಾಡು, ಸೀಮೆ, ಮಾಗಣಿ, ವೇಂಠೆ ಮುಂತಾದ ಆಡಳಿತ ವಿಭಾಗಗಳಾಗಿ ವಿಂಗಡಿಸಲಾಗಿತ್ತು. ಈ ವಿಭಾಗಗಳಿಗೆ ರಾಜಮನೆತನದವರೇ ಅಲ್ಲದೆ ಇತರ ನಿಷ್ಠಾವಂತ ಶ್ರೀಮಂತರೂ ಸಾಮಂತರೂ ಅಧಿಕಾರಿಗಳಾಗಿ ನೇಮಕಗೊಳ್ಳುತ್ತಿದ್ದರು. ಮಹಾಮಂಡಲೇಶ್ವರರು ಎಂಬುವರಿಗೆ ಬದಲಾಗಿ ದಂಡನಾಯಕರು ಇಂತಹ ಅಧಿಕಾರಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳಲು ತೊಡಗಿದರು. ಇವರು ಆಯಾ ಕಂದಾಯ ವಸೂಲಿಯ ನ್ಯಾಯ ವಿತರಣೆಯ ಅಧಿಕಾರ ಹೊಂದಿದ್ದರು. ನಾಯಕರು, ಸಾಮಂತರು, ತಮ್ಮ ಅಧೀನಕ್ಕೊಳಪಟ್ಟ ಪ್ರದೇಶದಲ್ಲಿ ವಿಧ ವಿಧದ ತೆರಿಗೆಯನ್ನು ವಿಧಿಸುವ ಅಧಿಕಾರ ಪಡೆದಿದ್ದರು. ಈ ನಾಯಕರ ಮೂಲಕ ಆಳುವ ಪದ್ಧತಿ 'ನಾಯಂಕರ' ಎಂಬ ಹೊಸ ಹೆಸರನ್ನು ಪಡೆಯಿತು. ಸ್ಥಳೀಯ ಆಡಳಿತಕ್ಕೆ ಸಂಬಂಧಿಸಿದಂತೆ ಗ್ರಾಮಸಭೆಗಳು, ನಾಡು, ಮಹಾನಾಡು ಮುಂತಾದ ಸಂಸ್ಥೆಗಳು ಅಸ್ಥಿತ್ವಕ್ಕೆ ಬಂದವು. ಇವು ಸಹ ಬಹುಮಟ್ಟಿಗೆ ಹಿಂದಿನ ಪದ್ಧತಿಗಳನ್ನೇ ಮುಂದುವರಿಸಿಕೊಂಡು ಹೋದರೂ ಇವುಗಳಿಗೆ ಹೆಚ್ಚಿನ ಅಧಿಕಾರ ಹಾಗೂ ಸ್ವಾತಂತ್ರ್ಯವಿತ್ತು. ಅಲ್ಲದೆ ಕಸುಬುಗಳಿಗೆ ಸಂಬಂಧಿಸಿದಂತೆ ಶ್ರೇಣಿಗಳು, ವಣಿಕ್ ಸಭೆಗಳು (ನಖರ) ವಿಶೇಷ ಹಕ್ಕುಗಳನ್ನು ಪಡೆದಿದ್ದು, ಅವು ತಮ್ಮದೇ ಆದ ವೃತ್ತಿಪರ ತೆರಿಗೆಯನ್ನು ವಿಧಿಸಲು ಮಾನ್ಯಮಾಡಲು ಶಕ್ತವಾಗಿತ್ತು. ಹೆಬ್ಬಾರುವ, ಗೌಡ, ಶಾನುಭೋಗ (ಸೇನಬೋವ) ಪ್ರಭು ಒಡೆಯ ಮಾಲಿಕ ಗ್ರಾಮಾಧಿಕಾರಿಗಳು ಈ ಕಾಲದ ಶಾಸನಗಳಲ್ಲಿ ಹೆಚ್ಚಾಗಿ ಕಾಣಿಸಿಕೊಂಡಿದ್ದಾರೆ."[೨೧]

ಇವುಗಳ ಪರಿಣಾಮವಾಗಿ ಅಧಿಕಾರವನ್ನು ಹೊಂದಿದವರು ಹೆಚ್ಚು ಶ್ರೀಮಂತರಾದರು. ಶ್ರೀಮಂತ ವರ್ಗ ರಾಜ್ಯದಲ್ಲಿ ಪ್ರಭಾವಶಾಲಿಯಾಯಿತು. ಮೇಲಿಂದ ಮೇಲೆ ಯುದ್ಧಗಳಾಗುತ್ತಿದ್ದ ಕಾರಣ ದಕ್ಷವಾದ ತರಬೇತಿ ಪಡೆದ ಸೈನ್ಯದ ಆವಶ್ಯಕತೆ ಹೆಚ್ಚಿತು. ರಾಜನಷ್ಟೇ ಅಲ್ಲದೇ ನಾಯಕರೂ ಸಹ ತಮ್ಮದೇ ಆಗ ಸೈನ್ಯವನ್ನು ರಚಿಸಿಕೊಂಡು ಅರಸರ ನೆರವಿಗೆ ಧಾವಿಸುತ್ತಿದ್ದರು. ಆದರೆ ಅಂತಹ ಪಾಳೆಯಪಟ್ಟುಗಳ

ನಾಯಕರೆ ಹಲವು ಸಂದರ್ಭಗಳಲ್ಲಿ ರಾಜರ ವಿರುದ್ಧ ದಂಗೆ ಏಳಲು ಪ್ರಾರಂಭಿಸಿದರು. "ನಾಯಕರು ತಮ್ಮ ಸಂಪತ್ತುಗಳನ್ನು ಹೆಚ್ಚಿಸಿಕೊಳ್ಳಲು ಪ್ರಜೆಗಳ ಮೇಲೆ ಹೆಚ್ಚಿನ ತೆರಿಗೆಗಳನ್ನು ಹಾಕುತ್ತಿದ್ದರು. ಅವುಗಳಿಂದ ಮುಕ್ತವಾಗಲು ಪ್ರಜೆಗಳು ದೊರೆಗಳ ತನಕ ದೂರು ಒಯ್ಯುತ್ತಿದ್ದ ನಿದರ್ಶನಗಳು ಕಂಡುಬಂದಿವೆ."[೨೨] ಕೃಷ್ಣದೇವರಾಯನು ಮುತ್ಸದ್ದಿಯು, ದಕ್ಷ ಆಡಳಿತಗಾರನೂ ಆಗಿದ್ದನು. ಈತನು ತನ್ನ ಆಳ್ವಿಕೆಯ ಪ್ರಾರಂಭ ಕಾಲದಲ್ಲಿ ಸತತವಾಗಿ ಸೈನಿಕ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದರೂ ದಕ್ಷವಾದ ರೀತಿಯಲ್ಲಿ ರಾಜ್ಯಭಾರವನ್ನು ಮಾಡಿದನು. ರಾಜನೀತಿ ಚತುರನಾದ ಈತನು ಪ್ರಜೆಗಳಿಗೆ ಹೊರೆಯಾಗದಂತೆ ಮಿತ ತೆರಿಗೆ ಪದ್ಧತಿಯನ್ನು ಜಾರಿಗೆ ತಂದನು.

ಮಹತ್ವಾಕಾಂಕ್ಷಿಯಾದ ತರುಣ ವೀರನಾದ ರಾಮರಾಯನು ಮೊದಲು ಕೃಷ್ಣದೇವರಾಯನ ಸರದಾರನಾಗಿದ್ದುಕೊಂಡು ಅವನಿಗೆ ಪ್ರೀತಿ ಪಾತ್ರನಾಗಿದ್ದ. ನಂತರ ಕೃಷ್ಣದೇವರಾಯನು ತನ್ನ ಮಗಳಾದ ತಿರುಮಲಾಂಬೆಯನ್ನು ರಾಮರಾಯನಿಗೆ ವಿವಾಹ ಮಾಡಿಕೊಡುತ್ತಾನೆ. ಅಂದಿನಿಂದ ರಾಮರಾಯನಿಗೆ ಅಳಿಯ ರಾಮರಾಯನೆಂದು ಹೆಸರಾಯಿತು. ರಾಮರಾಯನು ಸದಾಶಿವರಾಯನನ್ನು ಹೆಸರಿಗೆ ಮಾತ್ರ ರಾಜನನ್ನಾಗಿ ಮಾಡಿ, ಆಡಳಿತದ ಎಲ್ಲ ಚುಕ್ಕಾಣಿಯನ್ನು ತನ್ನಲ್ಲಿರಿಸಿಕೊಂಡನು. ಹಾಗೂ ಸೈನಿಕ ಸಾಮರ್ಥ್ಯವನ್ನು ಪ್ರದರ್ಶಿಸಿದನು.

### ಪ್ರಾಂತ್ಯಾಡಳಿತ

"ವಿಜಯನಗರ ಸಾಮ್ರಾಜ್ಯವನ್ನು ಅನೇಕ ಪ್ರಾಂತ್ಯಗಳಾಗಿ ವಿಭಾಗಿಸಲಾಗಿತ್ತು. ಪ್ರಾಂತ್ಯಗಳನ್ನು ರಾಜ್ಯ ಇಲ್ಲವೆ ಮಂಡಲಗಳೆಂದು ಕರೆಯಲಾಗಿತ್ತು. ರಾಜವಂಶದವರನ್ನು ಮತ್ತು ಸಮರ್ಥ ಸೇನಾನಿಗಳನ್ನು ಪ್ರಾಂತ್ಯಾಧಿಕಾರಿಗಳನ್ನಾಗಿ ನೇಮಿಸಲಾಗುತ್ತಿತ್ತು. ಪ್ರಾಂತೀಯ ರಾಜಧಾನಿಗಳಲ್ಲಿ ಬಲಾಢ್ಯವಾದ ದುರ್ಗಗಳನ್ನು ನಿರ್ಮಿಸಲಾಗಿತ್ತು. ಪ್ರತಿಯೊಬ್ಬ ಪ್ರಾಂತ್ಯಾಧಿಪತಿಯು ಕೇಂದ್ರ ಸರ್ಕಾರಕ್ಕೆ ಕಂದಾಯದ ಕೆಲಭಾಗವನ್ನು ಮತ್ತು ನಿಗದಿಪಡಿಸಲಾದ ಸೈನಿಕ ಪಡೆಗಳನ್ನು ಒದಗಿಸುತ್ತಿದ್ದನು. ಪ್ರಾಂತ್ಯಾಧಿಪತಿಗಳು ಸ್ವಾಯತ್ತಾಧಿಕಾರವನ್ನು ಪಡೆದಿದ್ದರು."[೨೩]

### ಕೇಂದ್ರಾಡಳಿತ

ವಿಜಯನಗರ ರಾಜಕೀಯ ಸಂದರ್ಭದಲ್ಲಿ ಅರಸರು ಪ್ರಚಂಡ ಆಡಳಿತಗಾರರಾಗಿದ್ದು ಪ್ರಜೆಗಳ ಕ್ಷೇಮ, ಅಭ್ಯುದಯವನ್ನು ಕಾಣುವ ಉದಾತ್ತ ಧ್ಯೇಯವನ್ನು ಹೊಂದಿದ ರಾಜಕೀಯ ಚತುರರಾಗಿದ್ದರು. 'ರಾಜ್ಯಾಧಿಕಾರವು ವಂಶಪಾರಂಪರ್ಯವಾಗಿ ಹಿರಿಯ ಮಗನಿಗೆ ಲಭ್ಯವಾಗುತ್ತಿತ್ತು. ರಾಜ್ಯಾಭಿಷೇಕ ಮಹೋತ್ಸವದಲ್ಲಿ ಸಾಮಂತರು ಹಾಗೂ ರಾಜ್ಯದ ಮುಖಂಡರು ಭಾಗವಹಿಸಿ ಶುಭ ಹಾರೈಸುತ್ತಿದ್ದರಲ್ಲದೆ

ಅರಸನಿಗೆ ವಿಧೇಯತೆ ಮತ್ತು ನಿಷ್ಠೆಯನ್ನು ವ್ಯಕ್ತಪಡಿಸುತ್ತಿದ್ದರು. ರಾಜನು ನಿರಂಕುಶ ಪ್ರಭುವಾಗಿರಲಿಲ್ಲ. ಮಂತ್ರಿಮಂಡಲವು ರಾಜನ ಅಧಿಕಾರವನ್ನು ನಿಯಂತ್ರಿಸುತ್ತಿದ್ದಿತು.

**ಯುವರಾಜ**

ಯುವರಾಜನು ಸಾಮ್ರಾಜ್ಯದ ಅರಸನ ಮಗನಾಗಿದ್ದನು. ರಾಜನ ನಂತರದ ಸ್ಥಾನವನ್ನು ಅವನಿಗೆ ಕೊಡಲಾಗಿತ್ತು. ಯುವರಾಜನು ಅರಸನ ಉತ್ತರಾಧಿಕಾರಿಯಾಗುತ್ತಿದ್ದನು. ಉತ್ತರಾಧಿಕಾರಿಯು ಅನುಭವ ಪಡೆಯಬೇಕೆಂಬ ಉದ್ದೇಶದಿಂದ ಈ ಕ್ರಮವನ್ನು ಕೈಗೊಳ್ಳಲಾಗುತ್ತಿತ್ತು. ಸಾಮಾನ್ಯವಾಗಿ ಯುವರಾಜರು ಪ್ರಾಂತ್ಯಗಳ ರಾಜ್ಯಪಾಲರುಗಳಾಗಿ ಕಾರ್ಯಭಾರ ವಹಿಸಿಕೊಳ್ಳುತ್ತಿದ್ದರು. ರಾಜ ವಯಸ್ಕನಾಗದಿದ್ದಲ್ಲಿ ಅವನು ವಯಸ್ಕನಾಗುವವರೆಗೆ ರಾಜಪ್ರತಿನಿಧಿ ಆಡಳಿತವನ್ನು ನಡೆಸುತ್ತಿದ್ದನು. ಈ ರಾಜಪ್ರತಿನಿಧಿಗಳು ಅಧಿಕಾರ ದುರುಪಯೋಗ ಮಾಡಿಕೊಂಡ ಹಲವಾರು ಸಂದರ್ಭಗಳು ವಿಜಯನಗರ ಸಾಮ್ರಾಜ್ಯದಲ್ಲಿ ನಡೆದಿವೆ.

ಉದಾಹರಣೆಗೆ ನೆಪಮಾತ್ರ ರಾಜನಾಗಿದ್ದ ಸದಾಶಿವರಾಯನ ಕಾಲದಲ್ಲಿ ಸರ್ವಾಧಿಕಾರವನ್ನು ರಾಮರಾಯ ಹಾಗೂ ಅವನ ಸಹೋದರರಾದ ತಿರುಮಲ ಮತ್ತು ವೆಂಕಟಾದ್ರಿಯರನ್ನು ಹೆಸರಿಸಬಹುದು. ಇದು ಆ ಕಾಲದಲ್ಲಿ ರಾಜಪ್ರತಿನಿಧಿಯ ಕೈಗೆ ಅಧಿಕಾರ ಕೊಟ್ಟರೆ ಯಾವ ರೀತಿಯ ಸಮಸ್ಯೆಗಳಾಗುತ್ತವೆ ಎಂಬುದಕ್ಕೆ ಉತ್ತಮ ಉದಾಹರಣೆ. ಸದಾಶಿವರಾಯ ಅಸಮರ್ಥನಾಗಿದ್ದ ರಾಮರಾಯ ಈ ಅವಕಾಶವನ್ನು ಚೆನ್ನಾಗಿ ಸದುಪಯೋಗಪಡಿಸಿಕೊಂಡನು.

**ಮಂತ್ರಿಮಂಡಲ**

ರಾಜನಿಗಿಂತ ಮಂತ್ರಿ ಬುದ್ಧಿವಂತನಿರಬೇಕು. ವಿಜಯನಗರವು ಸಣ್ಣ ಸಾಮ್ರಾಜ್ಯವಲ್ಲ ಇಂತಹ ವಿಶ್ವವಿಖ್ಯಾತವಾದ ಸಾಮ್ರಾಜ್ಯದಲ್ಲಿ ಕೇವಲ ರಾಜನೊಬ್ಬನೇ ಕಾರ್ಯನಿರ್ವಹಿಸುವುದು ಕಷ್ಟಸಾಧ್ಯವಾದ ಮಾತು. ಅದಕ್ಕಾಗಿಯೇ ಪ್ರತ್ಯೇಕ ಮಂತ್ರಿಮಂಡಲದ ರಚನೆಯನ್ನು ಮಾಡಲಾಗಿತ್ತು. "ಮಹಾಪ್ರಧಾನಿ, ಮಹಾಮಂತ್ರಿ, ಮಂತ್ರಿ, ದಂಡನಾಯಕ, ಕಾರ್ಯಕರ್ತ, ನಾಯಕ, ಖಜಾಂಚಿ, ರಾಯಸೂತ್ರಾಧಿಕಾರಿ ಅಥವಾ ರಾಯಸ" ಈ ರೀತಿ ಹಲವಾರು ಅಧಿಕಾರಿಗಳನ್ನು ಹೊಂದಿದ್ದನು. ಅವರಲ್ಲಿ ಹೆಚ್ಚಾಗಿ ರಾಜನ ಸಂಬಂಧಿಗಳು ಹಾಗೂ ಮಿತ್ರರು ಇರುತ್ತಿದ್ದರು.

**ಉದಾಹರಣೆಗೆ** ರಾಮರಾಯನು ಸಾಮ್ರಾಜ್ಯದ ಅಧಿಕಾರದ ಚುಕ್ಕಾಣಿ ಹಿಡಿದಾಗ ತನ್ನ ಅಣ್ಣ ತಿರುಮಲನಿಗೆ ಸೇನಾಪತಿಯ ಅಧಿಕಾರ ಕೊಡಿಸಿ ಮಿತ್ರನಾದ ಶಾರ್ಙ್ಗ ದೇವನಿಗೆ ಕೃಷ್ಣದೇವರಾಯನ ಖಾಸಗಿ ರಾಯಭಾರಿಯನ್ನಾಗಿ ನಿಯಮಿಸಿದನು. ಮಂತ್ರಿಮಂಡಲದ ಸದಸ್ಯರೊಂದಿಗೆ ಅರಸನು ನೇರವಾದ

ಹಾಗೂ ಉತ್ತಮವಾದ ಸಂಬಂಧವನ್ನು ಹೊಂದಿರುತ್ತಿದ್ದನು. ರಾಜ್ಯದ ಸಮಸ್ಯೆಗಳನ್ನು ಕುರಿತು ರಾಜನು ಮಂತ್ರಿಮಂಡಲದೊಡನೆ ಚರ್ಚಿಸಿ ತೀರ್ಮಾನ ಕೈಗೊಳ್ಳುತ್ತಿದ್ದನು. ಆದರೆ ಎಲ್ಲ ಪ್ರಮುಖ ವಿಚಾರಗಳ ಬಗ್ಗೆ ತೀರ್ಮಾನ ಕೈಗೊಳ್ಳಬೇಕಾದಾಗ ಅರಸನ ಮಾತೇ ಅಂತಿಮ ತೀರ್ಮಾನವಾಗುತ್ತಿತ್ತು. ಮಂತ್ರಿಮಂಡಲದೊಡನೆ ಚರ್ಚೆ ನಡೆಸಲು ಒಂದು ಪ್ರತ್ಯೇಕವಾದ ಭವನವಿತ್ತು. ಆ ಪ್ರತ್ಯೇಕವಾದ ಭವನದಲ್ಲಿ ಚರ್ಚೆ ನಡೆಯುತ್ತಿತ್ತು. ಆ ಭವನವನ್ನು ಮಂತ್ರಾಲೋಚನೆಗೆಂದೇ ಮೀಸಲಾಗಿ ಇರಿಸಲಾಗಿತ್ತು. ಹಾಗೂ ಅರಮನೆಯ ಬಲಭಾಗದಲ್ಲಿ ದಿವಾನಖಾನೆ ಅಥವಾ ಸಚಿವಾಲಯವಿತ್ತು ಎಂದು ಅಬ್ದುಲ್‌ರಜಾಕ್ (ಪರ್ಶಿಯಾದ ಯಾತ್ರಿಕ) ತನ್ನ ವರದಿಯಲ್ಲಿ ತಿಳಿಸಿರುವನು.

ಶೂದ್ರ ಪಂಗಡವನ್ನು ಬಿಟ್ಟು ಉಳಿದ ಮೇಲ್ವರ್ಗದ ಮೂರು ಪಂಗಡಗಳಿಂದ (ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ) ಮಂತ್ರಿಯನ್ನು ಆರಿಸಲಾಗುತ್ತಿತ್ತು. ಕೆಲವು ಸಂದರ್ಭದಲ್ಲಿ ವಂಶ ಪರಂಪರಾಗತವಾಗಿಯೂ ಮಂತ್ರಿ ಸ್ಥಾನ ಲಭ್ಯವಾಗುತ್ತಿತ್ತು. ರಾಜಸ್ಥಾನದಲ್ಲಿ ಅರಸರು, ಸರದಾರರು, ಪುರೋಹಿತರು, ಜ್ಯೋತಿಷ್ಯಗಾರರು, ಕವಿಗಳು, ಸಂಗೀತ ವಿದ್ವಾಂಸರು ಹಾಗೂ ಹಲವಾರು ಹೊಗಳು ಭಟ್ಟಂಗಿಗಳು ರಾಜಸಭೆಯಲ್ಲಿ ನೆರೆದಿರುತ್ತಿದ್ದರು.

ಈ ರೀತಿ ವಿಜಯನಗರ ಸಾಮ್ರಾಜ್ಯದ ಅರಸರು ಅತ್ಯಂತ ವೈಭವೋಪೇತವಾದ ಆಳ್ವಿಕೆಯನ್ನು ನಡೆಸಿ, ರಾಜ್ಯದ ಸುತ್ತಮುತ್ತ ಇರುವ ಮಾಂಡಲೀಕರಿಗೂ ಆದರ್ಶಪ್ರಾಯವಾಗಿದ್ದರು. ಮಂತ್ರಿಯ ಸಲಹೆಯ ಮೇರೆಗೆ ಅರಸನು ಕಾರ್ಯನಿರ್ವಹಿಸುತ್ತಿದ್ದ.

ಉದಾಹರಣೆಗೆ ಕೃಷ್ಣದೇವರಾಯನು ತಿಮ್ಮರಸನ (ಮಂತ್ರಿ) ಸಲಹೆಯ ಮೇರೆಗೆ ಪ್ರಜೆಗಳ ಮೇಲಿನ ತೆರಿಗೆ ಭಾರವನ್ನು ಕಡಿಮೆ ಮಾಡಿದ್ದ ಹಾಗೂ ವಿವಾಹ ತೆರಿಗೆಯನ್ನು ರದ್ದುಪಡಿಸಿದ್ದನು.

*** ವಿಜಯನಗರ ಕಾಲದ ಧರ್ಮ**

ದಕ್ಷಿಣ ಭಾರತದಲ್ಲಿ ಹಿಂದೂ ಧರ್ಮ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಸಂದರ್ಭದಲ್ಲಿ ಮುಸ್ಲಿಮರ ದಾಳಿಗೆ ಸಿಕ್ಕು ನುಚ್ಚು ನೂರಾಗುವುದರಲ್ಲಿದ್ದ ಹಿಂದೂ ಧರ್ಮ ಮತ್ತು ಸಂಸ್ಕೃತಿ ರಕ್ಷಣೆಗಾಗಿ ಹುಟ್ಟಿ ಬಂದಂತೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡಿತು. ಅದು ರೂಪಿಸಿಕೊಂಡ ಬೇರೆ ಬೇರೆ ಧರ್ಮ ಸಹಿಷ್ಣುತೆ ಇಡೀ ಸಾಮ್ರಾಜ್ಯದಾದ್ಯಂತ ಅನುಷ್ಠಾನಗೊಂಡಿತು. ಆಳರಸರ ಆಶ್ರಯದಲ್ಲಿ ಅನ್ಯಧರ್ಮಗಳು ಯಾವ ಬಾಧಕಗಳಿಲ್ಲದೆ ಅಸ್ತಿತ್ವದಲ್ಲಿದ್ದವು. ಅರಸರು ಎಲ್ಲ ಧರ್ಮಗಳಿಗೂ ಏಕರೂಪವಾದ ಪ್ರೋತ್ಸಾಹವನ್ನು ಕೊಡುತ್ತಿದ್ದರು. ಇದನ್ನು ಈ ಹಿಂದೂ ಅರಸರ ಧರ್ಮಸಹಿಷ್ಣುತೆಗೆ ಹಿಡಿದ ಕನ್ನಡಿ ಎನ್ನಬಹುದು.

"ಸಾಂಸ್ಕೃತಿಕ ಅಂಶಗಳಲ್ಲಿ ಧರ್ಮದ ಪರಿಕಲ್ಪನೆಯು ಒಂದು ಪ್ರಮುಖವಾದ ಅಂಶವಾಗಿದೆ. ಧರ್ಮ ಎಂಬುದಕ್ಕೆ ಯಾವುದೇ ನಿರ್ದಿಷ್ಟ ವ್ಯಾಖ್ಯೆ ಅಥವಾ ವಿವರಣೆಗಳು ಇಲ್ಲ. ಬದಲಾಗಿ ಇದೊಂದು ಮಾನವನ ಜೀವನದ ಅವಿಭಾಜ್ಯ ಅಂಗವಾಗಿದೆ. ಆದ್ದರಿಂದ ಇಲ್ಲಿ ಧರ್ಮವೆಂಬುದು ಮನುಷ್ಯನ ಹುಟ್ಟಿನಿಂದಲೇ ಪ್ರಾರಂಭವಾಗಿ ಜನಸಮುದಾಯವು ಜೀವನ ಮಾಡುವ ಕ್ರಮ ಅಥವಾ ವಿಧಾನ ಎಂದು ಪರಿಗಣಿಸಲು ಸಾಧ್ಯವಾಗಿದೆ. ಆ ಮೂಲಕ ಒಂದು ಚಾರಿತ್ರಿಕ ಕಾಲಘಟ್ಟದ ಸಾಂಸ್ಕೃತಿಕ ವಿಚಾರಗಳ ಗ್ರಹಿಕೆ ಹಾಗೂ ವಿಶ್ಲೇಷಣೆಗಳು ಸುಲಭ ಸಾಧ್ಯವಾಗಿದೆ"[೨೪] ಎಂಬ ವಿಚಾರವು ಗಮನಾರ್ಹವಾದುದು.

ಇತಿಹಾಸಕಾರರಲ್ಲಿ ವಿಜಯನಗರ ಸಾಮ್ರಾಜ್ಯ ಕುರಿತಾದ ಹುಟ್ಟು ಮತ್ತು ಬೆಳವಣಿಗೆಗಳಲ್ಲಿ ಅನೇಕ ಚರ್ಚೆ ಮತ್ತು ವಾದಗಳು ನಡೆದಿವೆ. ಇಂತಹ ಚರ್ಚೆ ವಾದಗಳಲ್ಲಿ ಧರ್ಮವನ್ನು ಬೆಸುಗೆ ಹಾಕಿ ನೋಡುವ ನೋಟಗಳೇ ಹೆಚ್ಚು. ಆ ಸಂದರ್ಭದಲ್ಲಿ ಹಿಂದೂ ಮತ್ತು ಮುಸ್ಲಿಂ ಧರ್ಮಗಳನ್ನು ಮುಖಾಮುಖಿಯನ್ನಾಗಿಸುವ ಕೆಲಸವು ನಡೆದಿದೆ. ಆದರೆ ಧರ್ಮದ ಹಿನ್ನೆಲೆಯ ವಾಸ್ತವ ಸ್ಥಿತಿ-ಗತಿಗಳು ಬೇರೆಯಾಗಿದ್ದವು. ವಿಜಯನಗರವನ್ನಾಳಿದ ರಾಜಮನೆತನಗಳು ವಿಭಿನ್ನ ಮತ-ಧರ್ಮ-ಪಂಥಗಳನ್ನು ಕುರಿತು ತಾರತಮ್ಯದಿಂದ ನಡೆದುಕೊಂಡಿದ್ದರ ಬಗ್ಗೆ ಎಲ್ಲಿಯೂ ಆಧಾರಗಳಿಲ್ಲ. ಬದಲಾಗಿ ಸಹಿಷ್ಣುತೆ ಮತ್ತು ಸೌಹಾರ್ದದ ಧೋರಣೆಗಳನ್ನು ವ್ಯಕ್ತಪಡಿಸಿದ್ದೆ ಹೆಚ್ಚು. ಆ ಕಾರಣದಿಂದಾಗಿ ಇಲ್ಲಿ ಕೇವಲ ಹಿಂದೂ-ಇಸ್ಲಾಂ ಧರ್ಮಗಳಷ್ಟೇ ಅಲ್ಲದೇ ಬೌದ್ಧ, ಜೈನ, ಕ್ರೈಸ್ತ ಮೊದಲಾದ ಮತ ಧರ್ಮಗಳು ಜನತೆ ಸಹ ಒಟ್ಟೊಟ್ಟಿಗೆ ಬದುಕುತ್ತಾ ಬಂದ ಚಾರಿತ್ರಿಕ ಸನ್ನಿವೇಶವಿದಾಗಿದೆ.

ವಿಜಯನಗರದ ಅರಸರು ತಮ್ಮ ಸೈನ್ಯದಲ್ಲಿದ್ದ ಮುಸ್ಲಿಂ ಸೈನಿಕರಿಗೂ ಮತ್ತು ನಾಗರಿಕರಿಗೂ ಉದಾರವಾದ ಆಶ್ರಯವನ್ನು ಒದಗಿಸಿದ್ದರು. ಹಾಗೂ ಇನ್ನಿತರ ಧರ್ಮೀಯರಿಗೂ ಅಷ್ಟೇ ವ್ಯವಸ್ಥಿತವಾದ ಆಶ್ರಯವನ್ನು ಕೊಟ್ಟಿದ್ದರು. ಅವರೆಲ್ಲರಿಗೂ ಅನುಕೂಲವಾಗುವಂತೆ ಬಸದಿ, ಚರ್ಚು, ವಿಹಾರ ಮತ್ತು ಮಸೀದಿಗಳನ್ನು ರಾಜ್ಯಾದ್ಯಂತ ನಿರ್ಮಿಸಲಾಗಿತ್ತು. ಸಂಗಮ ವಂಶದ ಅರಸರು ಶೈವರು. ಶೃಂಗೇರಿ ಮಹಾಪೀಠಕ್ಕೆ ಅವರು ನೀಡಿದ ಆಶ್ರಯ ಅಪಾರ. ಅಂತೆಯೇ ತುಳುವ ವಂಶಸ್ಥರು ಹಾಗೂ ಶ್ರೀ ವೈಷ್ಣವರು. ಎರಡನೇ ದೇವರಾಯ ವೀರಶೈವರಿಗೆ ಆಶ್ರಯದಾತನಾಗಿದ್ದ. ಕೃಷ್ಣದೇವರಾಯನು ವೈಷ್ಣವ ಧರ್ಮಾನುಯಾಯಿಯಾಗಿದ್ದರೂ ಅನ್ಯ ಧರ್ಮಗಳನ್ನು ಸಮಾನವಾಗಿ ಪ್ರೀತಿಸುತ್ತಿದ್ದ. ಕ್ರಿ.ಶ. ೧೫೨೩ರಲ್ಲಿ ಮಹಮದ್ ಷಾ ಎಂಬಾತನನ್ನು ಪುನಃ ಬೀದರಿನ ಸುಲ್ತಾನನ್ನಾಗಿ ಮಾಡಿ 'ಯವನರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದನ್ನು ಪಡೆದನು. ಹಂಪೆಯ ವಿರೂಪಾಕ್ಷ ದೇವಾಲಯದ ಜೀರ್ಣೋದ್ಧಾರ ಮಾಡಿರುವುದಲ್ಲದೆ ಅದರ ಕೆಲವು ಭಾಗಗಳನ್ನು ತಾನೇ ಕಟ್ಟಿಸಿದ. ಚಿದಂಬರ, ಕಾಳಹಸ್ತಿ, ಶ್ರೀಶೈಲ ಮುಂತಾದ ಕಡೆಗಳಲ್ಲಿರುವ ಶೈವ ದೇವಾಲಯಗಳಿಗೆ ದಾನ, ದತ್ತಿಗಳನ್ನು ನೀಡಿದನು.

ಇಂಥ ಸಹನೆಯ ಪರಿಸರದ ಸಾಂಸ್ಕೃತಿಕ ಅಂಶಗಳನ್ನು ವಿಶ್ವದ ಪ್ರವಾಸಿಗರು ತಮ್ಮ ಕಥನಗಳಲ್ಲಿ ದಾಖಲಿಸಲು ಸಾಧ್ಯವಾಗಿದೆ. ಈ ಪ್ರವಾಸಿ ಕಥನಗಳು ಮತ್ತು ದಿನಚರಿಗಳೊಂದಿಗೆ ಅಂದಿನ ಸಮಕಾಲೀನ ಸಾಹಿತ್ಯಗಳು, ಶಾಸನಗಳು, ನಾಣ್ಯಗಳು, ವಾಸ್ತುಶಿಲ್ಪಗಳು ಹಾಗೂ ಸಾಂಪ್ರದಾಯಿಕ ದಾಖಲೆಗಳು ಆಕರಗಳಾಗಿವೆ.

ಧಾರ್ಮಿಕವಾಗಿ ಈ ರಾಜ್ಯದಲ್ಲಿ ಆಯಾ ಧರ್ಮಕ್ಕೆ ಸೇರಿದ ಜನರಿಗೆ ಪ್ರತ್ಯೇಕ ಸ್ಥಳ ಮೀಸಲಾಗಿದ್ದಿತು. ಶೈವ ಮತ್ತು ವೈಷ್ಣವ ಪಂಥಗಳ ಪ್ರಾಬಲ್ಯ ಹೆಚ್ಚಿತ್ತು. ಆದರೂ ಈ ಎರಡು ಪಂಥದವರೊಡನೆ ಜೈನ ಮತ್ತು ಮುಸ್ಲಿಂ ಪಂಗಡಗಳೂ ವಾಸವಾಗಿದ್ದವು. ವಿಜಯನಗರದ ಅರಸರು ದೇವಾಲಯಗಳನ್ನು ನಿರ್ಮಿಸಿದಂತೆ ಜಿನಾಲಯಗಳನ್ನೂ ನಿರ್ಮಿಸಿರುವರು. ಕೆಲವೊಮ್ಮೆ ಧರ್ಮ-ಧರ್ಮಗಳ ನಡುವೆ ವೈಷಮ್ಯಗಳು ಉಂಟಾದರೆ ಅರಸರು ಪರಿಹಾರ ಸೂಚಿಸುತ್ತಿದ್ದರು. ಕ್ರಿ.ಶ. ೧೩೬೮ರಲ್ಲಿ ಶ್ರೀವೈಷ್ಣವರಿಗೂ ಜೈನರಿಗೂ ಕಲಹವಾದಾಗ ಬುಕ್ಕರಾಯನು ಎರಡೂ ಧರ್ಮಗಳ ಪ್ರಮುಖರನ್ನು ಕರೆಯಿಸಿ ಅವರ ವರ್ಗ ವೈಷಮ್ಯವನ್ನು ದೂರ ಮಾಡಿದನೆಂದು ತಿಳಿದು ಬರುತ್ತದೆ. ವಿಜಯನಗರದಲ್ಲಿ ಮುಸ್ಲಿಮರಿಗೂ ಸಮಾನ ಸ್ಥಾನಮಾನಗಳನ್ನು ನೀಡಲಾಗಿತ್ತು. ಪ್ರೌಢದೇವರಾಯನ ಕಾಲದಲ್ಲಿ ಅಹಮದ್‌ಖಾನನ ಧರ್ಮಶಾಲೆ ನಿರ್ಮಾಣಗೊಂಡಿತು. ಕೃಷ್ಣದೇವರಾಯನ ಕಾಲಕ್ಕೆ ಗೋರಿಗಳನ್ನು ಕಟ್ಟಿಸುವುದರ ಜೊತೆಗೆ ಮುಸ್ಲಿಂ ಕಲಾಶೈಲಿಯನ್ನು ಅರಮನೆಯ ಕಟ್ಟಡಗಳ ರಚನೆಯಲ್ಲಿ ಬಳಸಿಕೊಳ್ಳುವುದರ ಮೂಲಕ ಆದರ್ಶಮಯ ಸಾಮ್ರಾಜ್ಯವಾಗಿತ್ತು.

"ಉತ್ತರದಲ್ಲಿ ಬಹುಪಾಲು ಭೂಪ್ರದೇಶಗಳು ಮುಸ್ಲಿಂ ನವಾಬರ ಹಿಡಿತದಲ್ಲಿದ್ದವು. ದಕ್ಷಿಣದ ಮೇರೆಗಳನ್ನು ವಿಸ್ತರಿಸುವ ತೀವ್ರತೆ ಅಲ್ಲಾವುದ್ದಿನ್ ಖಿಲ್ಜಿಯಿಂದ ಆರಂಭಗೊಂಡಿತು. ಯಾದವರ (ಸೇವುಣರು) ದೇವಗಿರಿಯು ನವಾಬರ ತೆಕ್ಕೆಗೆ ಬಂದ ಮೇಲೆ ಕ್ರಮೇಣ ಹೊಯ್ಸಳರ ಅಧಿಪತ್ಯವು ಸಹ ಸೇರಿಕೊಂಡಿತು. ಇಂಥ ಸಂದರ್ಭದಲ್ಲಿಯೇ ವಿಜಯನಗರ ಸಾಮ್ರಾಜ್ಯವು ಸ್ಥಾಪನೆಯಾಗಿ, ಹೊಸದೊಂದು ಆಡಳಿತಕ್ರಮ ಜಾರಿಗೆ ಬಂದದ್ದು ರಾಜಕೀಯವಾಗಿ ಏರುಪೇರುಗಳು ಉಂಟಾಗಿದ್ದ ಈ ಸನ್ನಿವೇಶದಲ್ಲಿಯೇ ಧರ್ಮ-ಪಂಥಗಳ, ವಚನ-ದಾಸ, ಶೈವ-ವೈಷ್ಣವ, ಶ್ರೀವೈಷ್ಣವ-ಜೈನ, ಜೈನ- ಬೌದ್ಧ, ಇಸ್ಲಾಂ-ಕ್ರೈಸ್ತ ಮೊದಲಾದ ಮತ-ಧರ್ಮಗಳ ವಿಚಾರಗಳು ತಾತ್ವಿಕ ನಿಲುವುಗಳ ಸಂಘರ್ಷಾತ್ಮಕವಾದ ಸಂಕೀರ್ಣತೆಯನ್ನು ಸೃಷ್ಟಿಸಿದ್ದವು. ಇದರಿಂದ ಕೇವಲ ಹಿಂದೂ-ಇಸ್ಲಾಂಗಳ ಸಂಘರ್ಷವನ್ನೇ ಪ್ರಧಾನ ಧಾರೆಯನ್ನಾಗಿ ಪರಿಗಣಿಸುವ ಅಗತ್ಯವಿಲ್ಲ. ಮೂರ್ತ ಅಮೂರ್ತಗಳ ಈ ಪರಿಸರವನ್ನು ಗ್ರಹಿಕೆಗೆ ತೆಗೆದುಕೊಳ್ಳಲಾಗದ ಪೂರ್ವಗ್ರಹ ಪೀಡಿತ ಮನಸ್ಸುಗಳು ಕೋಮುವಾದಿ ನಿಲುವುಗಳ ಸೃಷ್ಟಿಗೆ ಪರಿಮಿತಗೊಂಡವು ಎಂಬುದು ಸ್ಪಷ್ಟವಾಗುತ್ತದೆ."[೨೫]

ಆದ್ದರಿಂದಲೇ ಅಂದಿನ ಧಾರ್ಮಿಕ ಸ್ಥಿತಿ-ಗತಿಗಳನ್ನು ಅರಿಯಲು ಮೊದಲು ಚಾಲ್ತಿಯಲ್ಲಿದ್ದ ಧರ್ಮ-ಪಂಥಗಳ ಹಾಗೂ ಉಪಪಂಥಗಳ (ಬಣಗಳ) ಸ್ವರೂಪವನ್ನು ತಿಳಿದುಕೊಳ್ಳುವುದು ಮುಖ್ಯವಾಗಿದೆ. ಈ ಹಿನ್ನೆಲೆಯಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ಅಂದು ಪ್ರಚಲಿತವಿದ್ದ ಐದು ಪ್ರಮುಖ ಧರ್ಮಗಳನ್ನು ಕುರಿತು ಪರಿಶೀಲಿಸಬಹುದಾಗಿದೆ :

## ಹಿಂದೂಧರ್ಮ

ವಿಜಯನಗರ ಸಾಮ್ರಾಜ್ಯದಲ್ಲಿ ಹಿಂದೂಧರ್ಮವು ಹೆಚ್ಚು ಪ್ರಚಲಿತವಿದ್ದು ಇದರಲ್ಲಿ ಎರಡು ಪಂಥಗಳಿದ್ದವು. ಒಂದು ವೈದಿಕ ಪಂಥವಾಗಿದ್ದರೆ ಮತ್ತೊಂದು ಶೈವ ಪಂಥವಾಗಿತ್ತು. ವೈದಿಕರು ವಿಷ್ಣುವಿನ (ಹರಿ) ಭಕ್ತರಾಗಿದ್ದರೆ, ಶಿವನನ್ನು ಪೂಜಿಸುವವರು ಶೈವರಾಗಿದ್ದರು. ವಿಷ್ಣುವನ್ನು ಪೂಜಿಸುವ ವೈಷ್ಣವರಿಗೂ ಶಿವನನ್ನು ಪೂಜಿಸುವ ಶೈವರಿಗೂ ಆಚಾರ-ವಿಚಾರಗಳಲ್ಲಿ ತಾರತಮ್ಯಗಳಿದ್ದವು. ವೈಷ್ಣವರಲ್ಲಿಯೂ ಶೈವರಲ್ಲಿಯೂ ಉಪವಿಭಾಗ ಕ್ರಮಗಳಿದ್ದರೂ ಒಟ್ಟಾರೆಯಾಗಿ ಹಿಂದೂಧರ್ಮವನ್ನು ವೈದಿಕ ಧರ್ಮ ಎಂದೇ ಕರೆಯಲಾಗಿದೆ.

## ಶೈವಪಂಥ

ವಿಜಯನಗರ ಸಾಮ್ರಾಜ್ಯವನ್ನಾಳಿದ ಮೊದಲ ರಾಜವಂಶಜರಾದ ಸಂಗಮರು ಶೈವ ಪಂಥದವರಾಗಿದ್ದರು. ಇವರು ಶಿವನ ಆರಾಧಕರಾಗಿದ್ದರು. ಈ ಸಾಮ್ರಾಜ್ಯದ ಮೊದಲ ದೊರೆಗಳಾದ ಹರಿಹರ ಮತ್ತು ಬುಕ್ಕರಾಯರು ಶೈವ ಪಂಥದ ವಿಚಾರಗಳಿಂದ ಪ್ರಭಾವಿತರಾಗಿದ್ದರು. ಹಾಗಿದ್ದರೂ ಎಲ್ಲ ಧರ್ಮದವರಿಗೂ ಸಮಾನ ಅವಕಾಶಗಳನ್ನು ಕಲ್ಪಿಸಿದ್ದರು. ಈ ಶೈವ ಧರ್ಮದಲ್ಲಿ ಹಲವಾರು ಒಳಪಂಗಡಗಳಿವೆ.

ಉದಾಹರಣೆಗೆ ಶೈವ, ಶೈವಾಗಮ, ವೀರಶೈವ, ಶ್ರೀಕಾಂತ, ಶಕ್ತಿವಿಶಿಷ್ಟಾದ್ವೈತ, ಶೈವಸಿದ್ಧಾಂತಿ, ಲಕುಲೀಶ, ಪಾಶುಪತ, ಕಾಳಾಮುಖ ಇತ್ಯಾದಿ.

ಲಕುಲೀಶ ಮತ್ತು ಪಾಶುಪತರಲ್ಲಿ ಕೆಲವು ಆಚಾರ-ವಿಚಾರಗಳು ಮತ್ತು ಪೂಜಾ ವಿಧಾನಗಳಲ್ಲಿ ಹಲವು ವ್ಯತ್ಯಾಸಗಳು ಕಂಡುಬರುತ್ತವೆ. ಹೀಗಾಗಿ ಅವರಲ್ಲಿ ಪ್ರತ್ಯೇಕತೆ ಕಂಡುಬರುತ್ತದೆ. ಲಕುಲೀಶನಿಂದ ಸ್ಥಾಪನೆಗೊಂಡ ಈ ಉಪಶಾಲೆಯು ಪಾಶುಪತಿಯ ಅನುಯಾಯಿಯಾಗುವಂತೆ ಮಾಡಿದೆ. ಕಾಳಾಮುಖ ಶೈವರು ತಮ್ಮ ಧರ್ಮ ಆಚರಣೆಗಾಗಿ ಆರು ರೀತಿಯ ಮುದ್ರೆಗಳನ್ನು ಹೊಂದಿದ್ದರು. ಆದರೆ ಈ ಎರಡೂ ಪಂಗಡದವರು ಆರಾಧಿಸುತ್ತಿರುವ ದೈವ ಮಾತ್ರ ಶಿವನೆ. ಶವ ಸಂಸ್ಕಾರದಂತಹ ವಿಧಿ ವಿಧಾನಗಳಲ್ಲಿ ಈ ಎರಡೂ ಶಾಖೆಗಳವರು ಒಂದೇ ವಿಧಾನವನ್ನು ಅನುಸರಿಸುತ್ತಿದ್ದರು.

ವಿಜಯನಗರ ಕಾಲದಲ್ಲಿ ವೀರಶೈವರು ಅಥವಾ ಶಕ್ತಿ ವಿಶಿಷ್ಟಾದ್ವೈತಿಗಳ ಆಚರಣೆಗಳು ಮಹತ್ವವನ್ನು ಪಡೆದಿದ್ದವು. ಇವರು ಶಿವ ಮತ್ತು ಜೀವಗಳನ್ನು ಒಂದೇ ಎಂದು ತಿಳಿದಿದ್ದರು. ಅಲ್ಲದೆ ಶಿವನು ಶಕ್ತಿಯೊಂದಿಗೆ ಬೆರೆತಿರುವನೆಂಬುದು ಇವರ ವಾದವಾಗಿತ್ತು. ವೀರಶೈವರಲ್ಲಿಯೂ ಶಿವಭಕ್ತಿ, ಶಿವಜ್ಞಾನ, ಶಿವವ್ರತ ಮತ್ತು ಶಿವಾರ್ಚನಗಳೆಂಬ ನಾಲ್ಕು ರೀತಿಯ ಕ್ರಿಯೆಗಳನ್ನು ಕಾಣಬಹುದು. ಈ ಕಾಲದ ವೀರಶೈವರಲ್ಲಿ ಆರಾಧ್ಯರು ಮತ್ತು ಲಿಂಗಾಯಿತರೆಂದು ಎರಡು ವಿಭಾಗಗಳಿದ್ದವು. ಆರಾಧ್ಯರು ಲಿಂಗ ಮತ್ತು ಜನಿವಾರವನ್ನು ಧರಿಸಿ ಶಿವನನ್ನು ಪೂಜಿಸಿದರೆ, ಲಿಂಗಾಯಿತರು ಲಿಂಗ, ವಿಭೂತಿ, ರುದ್ರಾಕ್ಷಿ, ಪಂಚಾಕ್ಷರಿ, ಜಂಗಮ, ತೀರ್ಥ ಪ್ರಸಾದಗಳೆಂಬ ಅಷ್ಟಾವರಣಗಳಿಗೆ ಹೆಚ್ಚಿನ ಮಹತ್ವವನ್ನು ನೀಡಿ ವೀರಭದ್ರನ ಆರಾಧಕರಾಗಿದ್ದರು. ಲಿಂಗಾಯಿತರಲ್ಲೂ ಪುನಃ ನಾಲ್ಕು ಪಂಗಡಗಳನ್ನು ಕಾಣಬಹುದು. ಅವುಗಳೆಂದರೆ ಜಂಗಮ, ಶೀಲವಂತ, ಬಣಜಿಗ ಹಾಗೂ ಪಂಚಮಶಾಲಿ ಎಂಬ ಪಂಗಡಗಳಿವೆ. ಇವುಗಳಲ್ಲಿ ಜಂಗಮರಿಗೆ ಮೊದಲ ಆದ್ಯತೆ. ಏಕೆಂದರೆ ಈ ಜಂಗಮರು ದೀಕ್ಷೆಯನ್ನು ನೀಡುವ ಗುರುಗಳ ಸ್ಥಾನದಲ್ಲಿದ್ದಾರೆ.

ಶೈವ ಪಂಥದಲ್ಲಿ ಅದ್ವೈತಿಗಳೆಂಬ ಇನ್ನೊಂದು ಶಾಖೆಯೂ ಇದೆ. ಅದ್ವೈತಿಗಳು ಶಿವನ ಸಂದೇಶವನ್ನು ಜನರಿಗೆ ಮುಟ್ಟಿಸುವವರು ಎಂದು ಇವರು ಭಾವಿಸಿದ್ದರು. ಬ್ರಹ್ಮಸೂತ್ರ ಭಾಷ್ಯದಿಂದ ಒಳಗೊಂಡು ವಿದ್ಯಾರಣ್ಯರ ವಿಚಾರಧಾರೆಯವರೆಗೂ ಅದ್ವೈತ ಶೈವರು ತಾತ್ವಿಕ ಚರ್ಚೆಗಳನ್ನು ನಡೆಸಿದ್ದರು. ಸಂಗಮ ವಂಶದವರಿಗೆ ಈ ತಾತ್ವಿಕ ಮಾರ್ಗದರ್ಶನ ದೊರೆತಿತ್ತು. ಆದುದರಿಂದಲೇ ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಮತ್ತು ಬೆಳವಣಿಗೆ ಸಾಧ್ಯವಾಯಿತು ಎಂದೂ ಹೇಳಲಾಗುವುದು. ಶೃಂಗೇರಿಯ ಪೀಠವು ಶಕ್ತಿ ವಿಶಿಷ್ಟಾದ್ವೈತಿಗಳಿಗೆ ಪವಿತ್ರ ಕ್ಷೇತ್ರವಾಗಿದೆ. ಶ್ರೀಕಾಂತ ಶೈವಾಗಮ ಮತ್ತು ಶೈವ ಸಿದ್ಧಾಂತ ಎಂಬ ಎರಡು ಪಂಗಡಗಳು ವಿಜಯನಗರ ಸಾಮ್ರಾಜ್ಯವನ್ನಾಳಿದ ತುಳುವ ಮತ್ತು ಅರವೀಡು ವಂಶಸ್ಥರು ಆಳುವ ಕಾಲದಲ್ಲಿ ಹೆಚ್ಚು ಪ್ರಾಶಸ್ತ್ಯವನ್ನು ಪಡೆದಿದ್ದುದನ್ನು ಕಾಣಬಹುದು. ಹಾಗೂ ಇವರು ಆಗಮ ಮತ್ತು ವೇದಾಂತಗಳ ಮೂಲಕ ಶಿವನನ್ನು ಪೂಜಿಸುವ ಪರಿಪಾಠವನ್ನು ಹೊಂದಿದ್ದರು.

## ವೈಷ್ಣವ ಪಂಥ

ವಿಷ್ಣುವಿನ ದಶಾವತಾರಗಳನ್ನು ನಂಬಿ ವಿಷ್ಣುವಿನ ಆರಾಧನೆ ಮಾಡುವವರನ್ನು ವೈಷ್ಣವರು ಎಂದು ಕರೆಯಲಾಗಿದೆ. ಇವರು ವಿಷ್ಣುವಿನ ಹಲವು ನಾಮಗಳನ್ನು ಭಜಿಸುತ್ತಾರೆ.

ಉದಾಹರಣೆಗೆ ಹರಿ, ನಾರಾಯಣ, ಗೋವಿಂದ, ಮುಕುಂದ, ಗೋಪಾಲ, ಮಾಧವ, ಮೋಹನ, ವಿಠ್ಠಲ, ಕೃಷ್ಣ, ಪುರುಷೋತ್ತಮ ಇತ್ಯಾದಿ ರೂಪಗಳಲ್ಲಿ ವಿಷ್ಣುವನ್ನು ಕಾಣುತ್ತಾರೆ. ೧೨೩೮-೧೩೧೭ ರಲ್ಲಿ ಇದ್ದ ಮಧ್ವಾಚಾರ್ಯರೇ ಈ ಪಂಥದ ಮೂಲ ಸ್ಥಾಪಕರು. ಈ ಪಂಥದ ಮೂಲ ಸಿದ್ಧಾಂತವೆಂದರೆ

ಹರಿಯೇ ಪರಮಸತ್ಯ. ಜಗತ್ತು ಮಿಥ್ಯವಲ್ಲ ಸತ್ಯವೆಂದು ಇವರ ಸಿದ್ಧಾಂತವಾಗಿತ್ತು. ವಿಜಯನಗರ ಸಾಮ್ರಾಜ್ಯದ ಎರಡನೇ ವಂಶವಾದ ಸಾಳುವರ ಕಾಲಕ್ಕೆ ಈ ಪಂಥವು ಹೆಚ್ಚು ಪ್ರಾಶಸ್ತ್ಯವನ್ನು ಪಡೆಯಿತು. ಹಾಗೂ ಶೈವ ಪಂಥದಷ್ಟೇ ಜನಪ್ರಿಯವಾಯಿತು.

"ವಿಷ್ಣುವಿನ ಆರಾಧಕರಲ್ಲೂ ಎರಡು ಪ್ರಮುಖ ಬಣಗಳಿವೆ. ಈ ಬಣಗಳ ಆಚಾರ-ವಿಚಾರಗಳು ಅಂದಿನ ಧಾರ್ಮಿಕ ಪರಿಸರದ ಮೇಲೆ ಪ್ರಭಾವ ಬೀರಿವೆ. ಈ ಎರಡೂ ಬಣದವರನ್ನು ದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳೆಂದು ಕರೆಯುತ್ತಾರೆ. ಈ ದ್ವೈತಿಗಳನ್ನು ವೈಷ್ಣವರೆಂದು ಕರೆಯುವ ಪರಿಪಾಠವೂ ಇದೆ. ರಾಮಾನುಜಾಚಾರ್ಯರನ್ನು ಮುಖ್ಯ ಪ್ರವರ್ತಕರೆಂದು ತಿಳಿದು ಅವರ ತತ್ವಗಳನ್ನು ಅನುಸರಿಸುವ ವಿಶಿಷ್ಟಾದ್ವೈತಿಗಳು ಕರ್ನಾಟಕದಲ್ಲಿ ಹೊಯ್ಸಳರ ಕಾಲದಿಂದಲೇ ಕಾಣಿಸಿಕೊಳ್ಳುತ್ತಾರೆ. ವಿಜಯನಗರವನ್ನಾಳಿದ ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವರಾಯ ಹಾಗೂ ರಾಮರಾಯನ ಕಾಲದವರೆಗೂ ಶ್ರೀವೈಷ್ಣವರು ಹೆಚ್ಚಿನ ಪ್ರಾಬಲ್ಯವನ್ನು ಪಡೆದಿದ್ದರು. ಈ ಕಾಲದಲ್ಲಿ ವೇದಾಂತ ದೇಶಿಕರು, ತಾತಾಚಾರ್ಯ ಮನೆತನದವರು ಶ್ರೀವೈಷ್ಣವ ಧರ್ಮವನ್ನು ಪ್ರಚಾರಪಡಿಸಿದರು. ಈ ಪಂಥದವರಿಗೆ ತಿರುಮಲ (ವೆಂಕಟೇಶ್ವರ)ವು ಮುಖ್ಯ ಆರಾಧನಾ ಕ್ಷೇತ್ರವಾಗಿತ್ತು."[೨೬]

ಹಿಂದೂ ಧರ್ಮದ ರಕ್ಷಣೆಗಾಗಿಯೇ ಉದಯಿಸಿದ್ದ ಈ ಸಾಮ್ರಾಜ್ಯವು ತನ್ನ ಉದಾರವಾದ ಆಡಳಿತ ನೀತಿಗಳಿಂದ ಹಲವು ಧರ್ಮಗಳ ರಕ್ಷಣೆಗೂ ನೆರವಾಯಿತು. ಎಲ್ಲಾ ಧರ್ಮೀಯರಿಗೂ ಉದಾರವಾದ ಆಶ್ರಯವನ್ನು ನೀಡಿತ್ತು.

## ಹರಿದಾಸ ಪರಂಪರೆ

ಮಧ್ಯಕಾಲೀನ ಚಾರಿತ್ರಿಕ ಘಟ್ಟದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಮೊದಲಿನ ಹಾಗೂ ನಂತರ ಬೆಳವಣಿಗೆಯ ಕ್ರಿಯೆಯಲ್ಲಿ ವಚನ ಹಾಗೂ ದಾಸ ಚಳುವಳಿಗಳ ಮಹತ್ವ ವಿಶೇಷವಾಗಿದೆ. ಶೈವ ಪಂಥದಲ್ಲಿ ಕಾಣಿಸಿಕೊಂಡ ಪ್ರಗತಿಪರ ವಿಚಾರಗಳು ವೈಷ್ಣವರಲ್ಲಿ ದಾಸ ಚಳುವಳಿಯ ರೂಪದಲ್ಲಿ ಕಾಣಿಸಿಕೊಂಡಿತು. ದಾಸರು ವಚನಕಾರರ ಉತ್ತರಾಧಿಕಾರಿಗಳಾಗಿ ಕಾಣಿಸಿಕೊಂಡರು. ವಚನಕಾರರು ಶಿವನನ್ನು ಆರಾಧಿಸಿದರೆ, ದಾಸರು ವಿಷ್ಣುವನ್ನು ಸರ್ವ ಸಮರ್ಪಣ ಭಾವದಿಂದ ಪೂಜಿಸಿದರು. ಆದರೆ ಇವರ ಆಶಯ ಮತ್ತು ಗುರಿ ಒಂದೇ ಆಗಿದ್ದವು. ಶರಣರು ಮತ್ತು ದಾಸರು ಸಮಾಜದ ಜನರ ಮೌಢ್ಯ ಅನಿಷ್ಟ ಹಾಗೂ ಮೂಢನಂಬಿಕೆಗಳನ್ನು ಇಲ್ಲವಾಗಿಸಲು ಸಾಕಷ್ಟು ಪ್ರಯತ್ನಿಸಿದರು. ತಮ್ಮ ವಚನಗಳು ಮತ್ತು ಕೀರ್ತನ ಸಾಹಿತ್ಯದ ಮೂಲಕ ಜನರ ಮನಃಪರಿವರ್ತನೆ ಮಾಡಿ ಸಾಹಿತ್ಯಕ ಕ್ರಾಂತಿಯನ್ನುಂಟು ಮಾಡಿದರು.

ದಾಸ ಪರಂಪರೆಯು ಮುಂದೆ ವ್ಯಾಸಕೂಟ ಮತ್ತು ದಾಸಕೂಟವೆಂಬ ಎರಡು ರೂಪಗಳನ್ನು ಪಡೆಯಿತು. ವ್ಯಾಸಕೂಟದಲ್ಲಿ ವ್ಯಾಸರಾಯ, ಶ್ರೀಪಾದರಾಯ, ರಾಘವೇಂದ್ರಸ್ವಾಮಿ ಮುಂತಾದವರಿದ್ದಾರೆ. ದಾಸಕೂಟದಲ್ಲಿ ಪುರಂದರದಾಸರು, ಕನಕದಾಸರು, ವಿಜಯದಾಸರು ಮತ್ತು ಗೋಪಾಲದಾಸರು ಪ್ರಮುಖರಾದವರು. ವ್ಯಾಸಕೂಟ ಮತ್ತು ದಾಸಕೂಟಗಳಲ್ಲಿ ಕೆಲವು ಭಿನ್ನತೆಗಳಿವೆ. ವ್ಯಾಸಕೂಟದವರು ಸಂಸ್ಕೃತ ಶ್ಲೋಕಗಳ ಮೂಲಕ ಹರಿಯನ್ನು ಧ್ಯಾನಿಸಿದರೆ, ದಾಸಕೂಟದ ದಾಸರು ಅಚ್ಚಗನ್ನಡದಲ್ಲಿ ಸರಳವಾಗಿ ಕೀರ್ತನೆಗಳನ್ನು ರಚಿಸಿ ಹಾಡತೊಡಗಿದರು. ತಮ್ಮ ಹಾಡುವ ಧಾಟಿಗೆ (ಲಯಕ್ಕೆ) ಸಂಗೀತದ ಶೈಲಿಯೊಂದನ್ನು (ಕರ್ನಾಟಕ ಸಂಗೀತ) ಹುಟ್ಟುಹಾಕಿದರು.

"ವೈಷ್ಣವರಲ್ಲಿ ಕೃಷ್ಣನನ್ನು ಆರಾಧಿಸುವ ಪಂಥವೊಂದು ಮಹಾರಾಷ್ಟ್ರದ ಪಂಢರಾಪುರದಿಂದ ವಿಜಯನಗರಕ್ಕೆ ಬಂದಿತು. ಅಲ್ಲಿನ ವಿಠೋಬ(ವಿಠ್ಠಲ)ನನ್ನು ಪೂಜಿಸುವ ಪರಂಪರೆಯು ಇಲ್ಲಿನ ಅರಸರನ್ನು ವಿಜಯ ವಿಠ್ಠಲ ದೇವಾಲಯ(ಹಂಪಿ)ದ ನಿರ್ಮಾಣಕ್ಕೆ ಪ್ರೇರಣೆ ನೀಡಿತ್ತು."[೨೭]

## ಜೈನಧರ್ಮ

ಅಹಿಂಸೆಯನ್ನೇ ಪ್ರಧಾನ ತಿರುಳನ್ನಾಗಿಸಿಕೊಂಡ ಜೈನಧರ್ಮ ಶತಮಾನಗಳಷ್ಟು ಹಳೆಯದು. ಇದರ ಸಂಸ್ಥಾಪಕ ಜೈನ ಧರ್ಮದ ಮೊದಲ ತೀರ್ಥಂಕರ ವೃಷಭನಾಥ ಅಥವಾ ಆದಿನಾಥನಾಗಿದ್ದರೂ ೨೪ನೆಯ ತೀರ್ಥಂಕರನಾದ ಮಹಾವೀರ ಪ್ರಮುಖ ತೀರ್ಥಂಕರನೆಂದೆನಿಸಿಕೊಂಡಿರುವನು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ "ಜೈನಯುಗ" ಎಂದು ಪ್ರತ್ಯೇಕವಾದ ಯುಗವೊಂದನ್ನು ಸೃಷ್ಟಿಸಲಾಗಿದೆ. ಜೈನಯುಗದ ಕವಿಗಳು ಸಂಸ್ಕೃತ ಭೂಯಿಷ್ಟವಾದ ಚಂಪುಕೃತಿಗಳನ್ನು ರಚಿಸಿ ಜನಮನ್ನಣೆ ಮತ್ತು ರಾಜಮನ್ನಣೆಯನ್ನು ಗಳಿಸಿದರು. ಅರಮನೆಯಿಂದ ಗುರುಮನೆಯವರೆಗೂ ಇವರ ಸಾಹಿತ್ಯದ ಕೀರ್ತಿಯು ಹಬ್ಬಿತು. ಜೈನಕವಿಗಳು ಹಲವಾರು ಪ್ರಸಿದ್ಧ ಕಾವ್ಯಕೃತಿಗಳನ್ನು ರಚಿಸಿ ಕನ್ನಡ ಸಿರಿದೇವಿಯ ಮುಡಿಯನ್ನು ಶೃಂಗರಿಸಿದರು. ಅವರಲ್ಲಿ ಪ್ರಮುಖರು ಪಂಪ, ಪೊನ್ನ, ರನ್ನ, ಜನ್ನ, ನಾಗಚಂದ್ರ ಇತ್ಯಾದಿ ಕವಿಗಳು. ೧೦ನೇ ಶತಮಾನವು ಕನ್ನಡ ಸಾಹಿತ್ಯದ 'ಸುವರ್ಣಯುಗ' ಎಂದು ಕರೆಸಿಕೊಂಡಿದೆ.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ವೇಳೆಗೆ ಜೈನಧರ್ಮ ಆಗಲೇ ಪಸರಿಸಿತ್ತು. ಜೈನ ಧರ್ಮದಲ್ಲೂ ಎರಡು ಒಳಪಂಗಡಗಳಿವೆ. ಶ್ವೇತಾಂಬರ ಮತ್ತು ದಿಗಂಬರರೆಂದು ಇವರಲ್ಲಿ ಎರಡು ವರ್ಗಗಳಿವೆ. ವಿಜಯನಗರದ ಅರಸರು ಜೈನ ಧರ್ಮಕ್ಕೆ ಹಾಗೂ ಜೈನರ ಅನುಯಾಯಿಗಳಿಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದರು. ಬಸದಿಗಳು ಹಾಗೂ ಜೈನ ಮಂದಿರಗಳ ನಿರ್ಮಾಣಕಾರ್ಯಕ್ಕೆ ಚಾಲನೆ ನೀಡಿದರು. ಜೈನ ಯತಿಗಳಿಗೆ ಗೌರವ ಸನ್ಮಾನಗಳನ್ನು ಮಾಡುವುದರ ಜೊತೆಗೆ ಜೈನರಿಗೆ ವಿಜಯನಗರದ ಸೈನ್ಯದಲ್ಲಿ ಉನ್ನತ ಹುದ್ದೆಗಳನ್ನು ಕೊಡಲಾಗುತ್ತಿತ್ತು.

ಉದಾಹರಣೆಗೆ ಪ್ರೌಢದೇವರಾಯನಿಗೆ ಲಕ್ಕಣ್ಣ ದಂಡನಾಥನು (ಜೈನ) ಮುಖ್ಯ ಸೇನಾನಿಯಾಗಿದ್ದನು. ನೇಮಿಚಂದ್ರ, ವಿದ್ಯಾನಂದ ಮೊದಲಾದ ಕವಿಗಳು ವಿಜಯನಗರದ ಅರಸರಿಂದ ಪ್ರೋತ್ಸಾಹಿತರಾಗಿದ್ದರು.

### ಬೌದ್ಧಧರ್ಮ

ಗೌತಮನಿಂದ ಪ್ರಸಿದ್ಧವಾದ ಬೌದ್ಧಧರ್ಮ ಬಹುಪ್ರಾಚೀನ ಧರ್ಮವಾಗಿದೆ. ಈ ಧರ್ಮವು ಭಾರತದಲ್ಲೇ ಹುಟ್ಟಿದರೂ ಸಹ, ಇಂದು ಭಾರತದಲ್ಲಿ ಬೌದ್ಧಧರ್ಮ ಭಾಗಶಃ ಇಲ್ಲವಾಗಿದೆ. ವಿಜಯನಗರ ಸಾಮ್ರಾಜ್ಯದ ಕಾಲಕ್ಕೆ ಬೌದ್ಧಧರ್ಮವಿದ್ದರೂ ಅದು ಜೈನ ಧರ್ಮದಷ್ಟು ಪ್ರಾಬಲ್ಯವನ್ನು ಪಡೆದಿರಲಿಲ್ಲ. ವಿಜಯನಗರದ ಅರಸರು ಬೌದ್ಧಧರ್ಮಕ್ಕೆ ಪ್ರೋತ್ಸಾಹವನ್ನು ಕೊಟ್ಟಿದ್ದರೆಂಬುದಕ್ಕೆ ಅಂದಿನ ಶಿಲ್ಪಕಲೆಗಳೇ ಸಾಕ್ಷಿ. ಕಾಂಚಿಪುರಂ, ಕಲಾವತಿ, ನಾಗಪಟ್ಟಣಂಗಳಲ್ಲಿ ವಿಶೇಷವಾಗಿ ಬೌದ್ಧ ಸ್ಮಾರಕಗಳಿವೆ. ಚಂದ್ರಗಿರಿಯ ಕೋದಂಡ ರಾಮಸ್ವಾಮಿ ದೇವಾಲಯದಲ್ಲಿನ ಮುಖಮಂಟಪದಲ್ಲಿ ಬುದ್ಧನ ವಿಗ್ರಹವಿದೆ. ಕೃಷ್ಣದೇವರಾಯನು ತನ್ನ ಅಮುಕ್ತ ಮಾಲ್ಯದ ಕೃತಿಯಲ್ಲಿ ಬುದ್ಧನನ್ನು ವಿಷ್ಣುವಿನ ಅವತಾರ ಎಂದು ಚಿತ್ರಿಸಿದ್ದಾನೆ.

### ಇಸ್ಲಾಂ ಧರ್ಮ

ಹಿಂದೂಧರ್ಮದ ಬೆಳವಣಿಗೆ ಹಾಗೂ ರಕ್ಷಣೆಗಾಗಿಯೇ ಉದಯವಾದ ವಿಜಯನಗರ ಸಾಮ್ರಾಜ್ಯವು ತನ್ನ ಆಡಳಿತಾವಧಿಯಲ್ಲಿ ಇತರ ಧರ್ಮೀಯರಿಗೂ ಉದಾರವಾದ ಆಶ್ರಯವನ್ನು, ಪೋಷಣೆಯನ್ನು ಒದಗಿಸಿತು. ಇಸ್ಲಾಂ ಧರ್ಮೀಯರು ಹಿಂದೂಗಳನ್ನು ಹೀನಾಯವಾಗಿ ಕಂಡು 'ಕಾಫರ'ರೆಂದು ಕರೆದು ಅವಮಾನ ಮಾಡಿದರೂ ಸಹ ಇಸ್ಲಾಂ ಧರ್ಮದ ಜನರಿಗೆ ಉದಾರವಾದ ಆಶ್ರಯವನ್ನು ನೀಡಿದ್ದರು. ಬಹಮನಿ ಮತ್ತು ವಿಜಯನಗರದ ಅರಸರಿಗೆ ಹೋರಾಟ ನಡೆದರೂ ಸಹ ಇಲ್ಲಿಯ ರಾಯರು ರಾಜ್ಯದಲ್ಲಿರುವ ಇಸ್ಲಾಂ ಧರ್ಮೀಯರ ವಿರೋಧಿಗಳಾಗಿರಲಿಲ್ಲ.

೨ನೆಯ ದೇವರಾಯನ ಕಾಲಕ್ಕೆ ಇಸ್ಲಾಂ ಧರ್ಮಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆತಿತ್ತು. ಪ್ರೌಢದೇವರಾಯನು ತನ್ನ ರಾಜಧಾನಿಯಲ್ಲಿ ಇಸ್ಲಾಂ ಸೈನಿಕರಿಗಾಗಿ ಮಸೀದಿಗಳನ್ನು ಕಟ್ಟಿಸಿದ್ದನು. "ಸಂಗಮರ ಕಾಲದಲ್ಲಿ ಒಬ್ಬ ಮುಸ್ಲಿಂ ಫಕೀರನಿಗಾಗಿ ಕಟ್ಟಿಸಲಾದ ಪೆನುಗೊಂಡಾದ ಬಾಬಯ್ಯನ ದರ್ಗಾವು ಉತ್ತಮವಾದ ಉದಾಹರಣೆಯಾಗಿದೆ."[೨೮] ಇಸ್ಲಾಂ ಧರ್ಮಕ್ಕೆ ಪ್ರೋತ್ಸಾಹವನ್ನು ನೀಡಿದ್ದ ಪ್ರೌಢದೇವರಾಯನು ತನ್ನ ಸಿಂಹಾಸನದ ಬಳಿಯೇ ಇಸ್ಲಾಂ ಧರ್ಮದ ಪವಿತ್ರ ಗ್ರಂಥವಾದ 'ಕುರಾನ್'ನನ್ನು ಇರಿಸಿ ಧರ್ಮ ಸಮನ್ವಯವನ್ನು ಮೆರೆದಿರುವನು. ಜೊತೆಗೆ ತನ್ನನ್ನು ಭೇಟಿಯಾಗಲು ಬಂದ ಇಸ್ಲಾಂ ಧರ್ಮೀಯರು ನನಗೆ ನಮಸ್ಕರಿಸದೆ ತಮ್ಮ ಧರ್ಮಗ್ರಂಥಕ್ಕೆ ನಮಸ್ಕರಿಸಲಿ ಎನ್ನುವ ಉದಾತ್ತವಾದ

ವಿಚಾರವನ್ನು ಪ್ರೌಢದೇವರಾಯನು ಹೊಂದಿದ್ದನು. ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ವಿಜಯನಗರದ ಅರಸರು ಮಾನವತಾವಾದಿಗಳು ಉದಾತ್ತ ಧ್ಯೇಯವಾದಿಗಳೂ ಆಗಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಸ್ವತಃ ರಾಮರಾಯನೆ ಮುಸ್ಲಿಂ ಧರ್ಮದ ಯುವತಿಯನ್ನು ಮದುವೆಯಾದ ಉದಾಹರಣೆಯಿದೆ. ಇಸ್ಲಾಂ ಧರ್ಮದ ಇತಿಹಾಸಕಾರ ಫಿರಿಸ್ತಾ ವಿಜಯನಗರದ ಅರಸರ ಬಗ್ಗೆ ಮಾಡಿರುವ ಕಥನಗಳು ಪ್ರಸಿದ್ಧವಾಗಿವೆ.

## ಕ್ರೈಸ್ತಧರ್ಮ

ವಿಜಯನಗರದ ರಾಯರು ಮುಸ್ಲಿಂ ಮತ್ತು ಕ್ರೈಸ್ತ ಧರ್ಮೀಯರಿಗೆ ಸಮಾನವಾದ ಆಶ್ರಯ ಮತ್ತು ಉದಾರವಾದ ರಕ್ಷಣೆಯನ್ನು ನೀಡಿದ್ದರು. ಇಸ್ಲಾಂ ಧರ್ಮೀಯರಿಗೆ ಮಸೀದೆಗಳನ್ನು ನಿರ್ಮಿಸಿದಂತೆ ಕ್ರೈಸ್ತ ಧರ್ಮದವರಿಗಾಗಿ ಚರ್ಚುಗಳನ್ನು ನಿರ್ಮಿಸಿದ್ದರು. ಬಾರ್ಬೋಸನು ಹೇಳುವಂತೆ ರಾಜ್ಯದಲ್ಲಿ ಕ್ರೈಸ್ತರಿಗೂ ಹಾಗೂ ಕ್ರೈಸ್ತರಲ್ಲದವರಿಗೂ ಸಮಾನ ಅವಕಾಶವಿತ್ತು. ವಿಜಯನಗರದ ಅರಸರು ಈ ಎಲ್ಲಾ ಧರ್ಮದ ಜನರ ರಕ್ಷಣೆಯ ಜೊತೆಗೆ ಮಠಮಾನ್ಯಗಳ ನಿರ್ಮಾಣಕ್ಕೂ ದೇವಾಲಯಗಳ ನಿರ್ಮಿತಿಗೂ ವಿಶೇಷ ಗಮನವನ್ನು ಹರಿಸಿದರು.

## ದೇವಾಲಯಗಳು ಮತ್ತು ಮಠಗಳು

ವಿಜಯನಗರ ಸಾಮ್ರಾಜ್ಯ ಆಳ್ವಿಕೆಯ ಕಾಲಕ್ಕೆ ರಾಜ್ಯದಲ್ಲಿ ಸಾಕಷ್ಟು ದೇವಾಲಯಗಳು ಮತ್ತು ಮಠಗಳು ಸ್ಥಾಪನೆಗೊಂಡಿದ್ದು ಕೇವಲ ರಾಜಮನೆತನಗಳು ಅಷ್ಟೇ ಅಲ್ಲದೆ ಸಮಾಜದ ವಿವಿಧ ಧರ್ಮದವರು ಗುಡಿಗುಂಡಾರಗಳನ್ನು ನಿರ್ಮಿಸುವುದಕ್ಕಾಗಿ ಸಾರ್ವಜನಿಕವಾಗಿ ಹಣವನ್ನು ಸಂಗ್ರಹಿಸಿ ಮಠ, ಮಂದಿರಗಳನ್ನು ನಿರ್ಮಿಸುತ್ತಿದ್ದರು. ವಿಜಯನಗರ ಕಾಲಕ್ಕೆ ದೇವದಾಸಿ ಪದ್ಧತಿ ತುಂಬಾ ಪ್ರಚಲಿತವಿದ್ದು (ಇಂದಿಗೂ ಇದೆ) ದೇವಾಲಯಗಳಲ್ಲಿ ದೇವರ ಸೇವೆಯನ್ನು ಮಾಡುವುದರ ಜೊತೆಗೆ ನರ್ತನವನ್ನು ಮಾಡುತ್ತಿದ್ದರು. ಅಂದು ಈ ದೇವಾಲಯ ಮತ್ತು ಮಠಗಳು ಸಾಂಸ್ಕೃತಿಕ ಕೇಂದ್ರಗಳಾಗಿದ್ದವು. ಜನರು ಈ ಸಾಂಸ್ಕೃತಿಕ ಕೇಂದ್ರಗಳಿಂದ ಆಕರ್ಷಿತರಾಗಿದ್ದರು.

## ಹಬ್ಬಗಳು

ಹಬ್ಬಗಳ ಆಚರಣೆಯು ಧಾರ್ಮಿಕ ಜೀವನದ ಸಂಕೇತವಾಗಿ ಪರಿಗಣಿಸಲ್ಪಟ್ಟಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಣ ವ್ಯವಸ್ಥೆ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಜಾರಿಯಲ್ಲಿದ್ದು ಈ ಎಲ್ಲ ವರ್ಣದವರು ಹಬ್ಬಗಳಲ್ಲಿ ಭಾಗವಹಿಸುತ್ತಿದ್ದರು. ವಿದೇಶ ಪ್ರವಾಸಿಗರ ಕಥನಗಳಲ್ಲಿ ಹಾಗೂ ದಿನಚರಿಗಳಲ್ಲಿ ವರ್ಣಿಸಲಾಗಿರುವ ಹಬ್ಬಗಳಲ್ಲಿ ನವರಾತ್ರಿ (ದಸರಾಹಬ್ಬ) ದೀಪಾವಳಿ ಮತ್ತು ಹೋಳಿ ಹುಣ್ಣಿಮೆಯ ಓಕುಳಿ ಎರಚುವ ಸಂಪ್ರದಾಯಗಳು ತಿಳಿದುಬರುತ್ತವೆ.

ಹೋಳಿ ಹಬ್ಬದಲ್ಲಿ ಬಣ್ಣವನ್ನು ಹಾಕುವುದು ಸಾಮಾನ್ಯ. ಅಂದರೆ ಇದು ೧೪ನೇ ಶತಮಾನದಲ್ಲೇ ಇತ್ತು ಎಂಬ ಅಂಶ ಗಮನಾರ್ಹ.

ದಸರಾ ಉತ್ಸವವು ವಿಜಯಗರ ಸಾಮ್ರಾಜ್ಯದಲ್ಲೇ ಜನಿಸಿ ವಿಶ್ವದೆಲ್ಲೆಡೆ ಪಸರಿಸಿದೆ. ಇದು ಒಂಬತ್ತು ದಿನಗಳವರೆಗೆ ಆಚರಿಸುವ ಹಬ್ಬವಾಗಿರುವುದರಿಂದ ಈ ಹಬ್ಬಕ್ಕೆ ನವರಾತ್ರಿ ಎಂಬ ಹೆಸರು ಬಂದಿದೆ. ಪರ್ಶಿಯಾದ ಯಾತ್ರಿಕ ಅಬ್ದುಲ್ ರಜಾಕ್ ಈ ಹಬ್ಬವನ್ನು ಕುರಿತು ವರ್ಣಿಸಿದ್ದಾನೆ.

ದೀಪಗಳ ಹಬ್ಬವಾದ ದೀಪಾವಳಿಯು ಸಹ ಮೂರು ದಿನಗಳವರೆಗೆ ಆಚರಿಸಲ್ಪಡುತ್ತಿತ್ತು. ಈ ಸಂದರ್ಭದಲ್ಲಿ ಮೂರು ದಿನಗಳವರೆಗೆ ದೀಪಗಳನ್ನು ರಕ್ಷಿಸಲಾಗುತ್ತಿತ್ತು. ಇಂದು ದೀಪಗಳ ಹಬ್ಬ ಪಟಾಕಿಗಳ ಹಬ್ಬವಾಗಿ ಪರಿಣಮಿಸಿದೆ.

ಈ ಮೂರೂ ಪ್ರಮುಖ ಹಬ್ಬಗಳ ಜೊತೆಗೆ ರಾಜ್ಯದಲ್ಲಿ ಸಂಕ್ರಾಂತಿ, ಶ್ರೀ ರಾಮನವಮಿ, ಯುಗಾದಿ ಹಾಗೂ ಸೋಮವಾರ ವ್ರತ (ಸೋಳಾ ಸೋಮವಾರ) ಅಂದರೆ ಹದಿನಾರು ಸೋಮವಾರಗಳ ವ್ರತಗಳನ್ನು ಆಚರಿಸುತ್ತಿದ್ದಂಥ ಉಲ್ಲೇಖಗಳಿವೆ.

ದಾಸಶ್ರೇಷ್ಠರೆಂದು ಕರ್ನಾಟಕದ ಜನಮನದಲ್ಲಿ ಪ್ರಸಿದ್ಧರಾದ ಕನಕದಾಸರು ತಮ್ಮ ಕೃತಿಯಾದ 'ಮೋಹನ ತರಂಗಿಣಿ'ಯಲ್ಲಿ (ಇದು ಕೃಷ್ಣದೇವರಾಯನ ಚರಿತ್ರಯಾಗಿದೆ.) ದೀಪಾವಳಿ, ನವರಾತ್ರಿ ಹಾಗೂ ಬಣ್ಣವೆರಚುವ ಹೋಳಿ ಹಬ್ಬಗಳನ್ನು ಕುರಿತು ವಿಶೇಷವಾಗಿ ಹೇಳಿದ್ದಾರೆ. ನವರಾತ್ರಿಯು ಕೇವಲ ಧಾರ್ಮಿಕ ಹಬ್ಬವಷ್ಟೇ ಅಲ್ಲ, ಅದು ರಾಜಕೀಯ ಪ್ರತಿಷ್ಠೆಯ ಸಂಕೇತವೂ ಆಗಿತ್ತು. ಬಹುಶಃ ಕನಕದಾಸರು ದಾಸರಾಗುವ ಪೂರ್ವದಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ದಂಡನಾಯಕನಾಗಿದ್ದು, ಅಲ್ಲಿ ಕಂಡಿರುವ ಹಬ್ಬಗಳ ವೈಭವವನ್ನು ತಮ್ಮ ಕೃತಿಯಲ್ಲಿ ನಿರೂಪಿಸಿದ್ದಾರೆ.

## ಅರಸರು ಮತ್ತು ಅವರ ಧಾರ್ಮಿಕ ನಿಲುವುಗಳು

ಹಂಪೆಯ ಅರಸನಾದ ವಿರೂಪಾಕ್ಷನ ಸನ್ನಿಧಿಯಲ್ಲಿ ವಿಜಯನಗರ ಸಾಮ್ರಾಜ್ಯ ರೂಪುಗೊಂಡಿತು. ಈ ಮನೆತನದ ಸಂಗಮ ವಂಶದ ಸಂತತಿಯಿಂದ ಕೊನೆಯ ಅರವೀಡು ಸಂತತಿಯವರೆಗೂ ಅರಸರು ಸರ್ವಧರ್ಮ ಸಮನ್ವಯವನ್ನು ಆಚರಿಸಿದರು. ಶೈವ, ವೈಷ್ಣವ, ಕ್ರೈಸ್ತ, ಇಸ್ಲಾಂ ಇನ್ನಿತರ ಧರ್ಮಗಳಲ್ಲಿ ವರ್ಗ ವೈಷಮ್ಯವನ್ನು ಮಾಡದೆ ಸಹಬಾಳ್ವೆ ನಡೆಸಿ ಸೌಹಾರ್ದ ವಾತಾವರಣವನ್ನು ಕಲ್ಪಿಸಿದರು. ಎಲ್ಲ ದೇವಾಲಯ, ಮಠ, ಬಸದಿ, ಚೈತ್ಯಾಲಯ, ಚರ್ಚ್, ಮಸೀದಿ, ದರ್ಗಾಗಳಿಗೆ ಸಮಾನವಾದ ದಾನದತ್ತಿಗಳನ್ನು ನೀಡಿರುವುದು ತಿಳಿದುಬರುತ್ತದೆ.

## * ವಿಜಯನಗರ ಕಾಲದ ಸಮಾಜ

ವಿಜಯನಗರ ಕಾಲದ ಸಾಮಾಜಿಕ ಜೀವನ ಕುರಿತು ಹಾಗೂ ಅಲ್ಲಿಯ ಸ್ಥಿತಿಗತಿಗಳನ್ನು ಕುರಿತಂತೆ ಅನೇಕ ಮೌಲ್ಯಗಳ ಬಗೆಗೆ ವಿದೇಶಿ ಪ್ರವಾಸಿಗರ ಲೇಖನಗಳು, ದಿನಚರಿಗಳು, ಶಾಸನಗಳು ಸಮಕಾಲೀನ ಸಾಹಿತ್ಯಾಧಾರಗಳು ಸಮರ್ಪಕವಾದ ಮಾಹಿತಿಯನ್ನು ಒದಗಿಸುತ್ತವೆ.

"ವಿಜಯನಗರದ ಸಾಮಾಜಿಕ ವ್ಯವಸ್ಥೆಯಲ್ಲಿ ಸನಾತನ ಹಿಂದೂ ಧರ್ಮದಲ್ಲಿ ಕಂಡು ಬರುವ ಎಲ್ಲಾ ಮುಖ್ಯ ಅಂಶಗಳನ್ನು ಗುರುತಿಸಬಹುದಾಗಿತ್ತು. ಹಿಂದೂ ಸಮಾಜವು ವೃತ್ತಿಯ ಅವಲಂಬನೆಯ ತತ್ವದ ಆಧಾರದ ಮೇಲೆ ನಾಲ್ಕು ವರ್ಣಗಳಾಗಿ ವಿಂಗಡಿಸಲ್ಪಟ್ಟಿತ್ತು. ರಾಜನು ಸಾಮಾಜಿಕ ವ್ಯವಸ್ಥೆಯ ನಿರ್ವಹಣೆ ಹಾಗೂ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತಿದ್ದನು. ಇಂತಹ ಸಾಮಾಜಿಕ ವ್ಯವಸ್ಥೆಯ ನಿರ್ವಹಣೆಯಲ್ಲಿ ಪ್ರತಿಯೊಬ್ಬ ಪ್ರಜೆಯು ಜವಾಬ್ದಾರಿಯ ಸಮಪಾಲನ್ನು ಹೊಂದಿದ್ದು ಇದರ ಅನುಷ್ಠಾನದಲ್ಲಿ ಸಹಕಾರದಿಂದ ವರ್ತಿಸುತ್ತಿದ್ದನು. ಅನೇಕ ಭಿನ್ನಾಭಿಪ್ರಾಯಗಳಿದ್ದರೂ ಬೇರೆ, ಬೇರೆ ವರ್ಗಗಳಿಗೆ ಸೇರಿದ ಜನರು ಅನ್ಯೋನ್ಯತೆ ಹಾಗೂ ಭ್ರಾತೃತ್ವ ಭಾವನೆಗಳನ್ನು ಇತರರಲ್ಲಿ ವ್ಯಕ್ತಪಡಿಸುತ್ತಿದ್ದರು."[೨೯]

ವಿಜಯನಗರ ಸಾಮ್ರಾಜ್ಯದ ಸಾಮಾಜಿಕ ಜೀವನದಲ್ಲಿ ವೃತ್ತಿಯಿಂದ ಜಾತಿ ನಿರ್ಧರಿತವಾಗುತ್ತಿತ್ತು. ರಾಜನು ಸಮಾಜದ ಜವಾಬ್ದಾರಿಯನ್ನು ಹೊತ್ತಿರುವಂತೆ ಪ್ರತಿಯೊಬ್ಬ ಪ್ರಜೆಯು ತಂತಮ್ಮ ಜವಾಬ್ದಾರಿಯನ್ನು ಸರಿಸಮಾನವಾಗಿ ಒಪ್ಪಿಕೊಂಡಿರುವುದನ್ನು ಗಮನಿಸಿದರೆ ಪ್ರತಿಯೊಬ್ಬ ಪ್ರಜೆಗೂ ಸಮಾನತೆ ಇತ್ತು ಎನ್ನುವುದು ಸ್ಪಷ್ಟವಾಗಿ ತಿಳಿದು ಬರುತ್ತದೆ.

"ಕನ್ನಡವಲ್ಲದೆ ಬೇರೆ ಭಾಷೆಗಳನ್ನಾಡುವ ಸ್ಥಳೀಯ ಬ್ರಾಹ್ಮಣರಿದ್ದರು. ಉತ್ತರ ಕನ್ನಡದ ಮುಸ್ಲಿಮರು ಕೊಂಕಣಿ ಮಾತನಾಡುತ್ತಿದ್ದರು. ವಿಜಯನಗರ ಕಾಲದಲ್ಲಿ ಮತ್ತು ಅನಂತರದಲ್ಲಿ ಅನೇಕ ಕಾರಣಗಳಿಂದ ಪೋರ್ಚುಗೀಸ್ ಮತ್ತು ಗೋವಾದಿಂದ ಬಂದು ನೆಲೆಸಿದ ಕೊಂಕಣಿ ಮಾತನಾಡುವ ಕ್ರಿಶ್ಚಿಯನ್ನರಿದ್ದರು. ಕರ್ನಾಟಕದ ಕರಾವಳಿ ಪ್ರದೇಶ, ಮೈಸೂರು ಮತ್ತು ಹಾಸನ ಜಿಲ್ಲೆಗಳ ಭಾಗಗಳಲ್ಲಿ ಮುಖ್ಯವಾಗಿ ವಾಸವಾಗಿದ್ದ ಜೈನರಿದ್ದರು. ಕುಡಿಯರು ಮತ್ತು ಸೋಲಿಗರಂತಹ ವಿವಿಧ ಆದಿವಾಸಿ ಜನರು ಕೊಡವ ಮತ್ತು ಹಾಲಕ್ಕಿ ಒಕ್ಕಲುಗಳಂತಹ ಜನರು ವಾಸವಾಗಿದ್ದರು.

ಮಹಿಳೆಯರ ಉಡುಗೆ-ತೊಡುಗೆಯಿಂದಾಗಿ ಸಮಕಾಲೀನ ಜೀವನಕ್ಕೆ ವರ್ಣ ವೈವಿಧ್ಯವನ್ನು, ಬೆಡಗನ್ನು ತಂದುಕೊಟ್ಟಿದ್ದವು. ಮೂಲತಃ ಆಫ್ರಿಕಾದಿಂದ ಬಂದ ಸಿದ್ಧಿಗಳು ವಿಜಯನಗರ ಸಾಮ್ರಾಜ್ಯದ ಉತ್ತರ ಕನ್ನಡ ಪ್ರದೇಶದಲ್ಲಿ ಅಧಿಕ ಸಂಖ್ಯೆಯಲ್ಲಿ ನೆಲೆಸಿದ್ದರು. ಇವೆಲ್ಲವುಗಳಿಂದ ಮಧ್ಯಕಾಲೀನ ಯುಗದಲ್ಲಿ ಈ ಸಾಮ್ರಾಜ್ಯವು 'ಮಾನವ ಕುಲ ಬಿತ್ತರಿಸುವ ಚಿತ್ರಶಾಲೆಯಂತೆ' ತೋರುತ್ತಿತ್ತು. ಈ ಸಾಮಾಜಿಕ ವರ್ಗಗಳು ಅನುಕ್ರಮವಾದ ಒಂದು ಶ್ರೇಣಿಯಲ್ಲಿ ಜೋಡಣೆಗೊಂಡಿದ್ದವು."[೩೦]

ಸಮಾಜದಲ್ಲಿ ಹಲವು ಪಂಗಡಗಳ ಜನರು ವಾಸವಾಗಿದ್ದರು. ಹಲವು ಭಾಷೆಗಳನ್ನಾಡುವ ಬ್ರಾಹ್ಮಣರು, ಕೊಂಕಣಿ ಭಾಷೆಯನ್ನಾಡುವ ಮುಸ್ಲಿಮರಿರಲು ಕಾರಣ ಅವರು ಉತ್ತರ ಕನ್ನಡದ ಕಡೆಯಿಂದ ವಿಜಯನಗರ ಸಾಮ್ರಾಜ್ಯಕ್ಕೆ ಬಂದು ನೆಲೆಸಿದ್ದರು. ಹಲವಾರು ಜಾತಿ ಉಪಜಾತಿಗಳಿದ್ದರೂ, ಜಾತಿಪದ್ಧತಿಯು ಸಂಕೀರ್ಣವಾಗಿತ್ತು. ಬ್ರಾಹ್ಮಣರು ಸಮಾಜದಲ್ಲಿ ಶ್ರೇಷ್ಠರಾಗಿದ್ದುದಲ್ಲದೆ ಪ್ರಭಾವಶಾಲಿ ವ್ಯಕ್ತಿಗಳಾಗಿದ್ದರು. ರಾಜನ ನಂತರದ ಸ್ಥಾನ ಬ್ರಾಹ್ಮಣರಿಗೆ ಇತ್ತು. ಬ್ರಾಹ್ಮಣ ವರ್ಗವನ್ನು ಸಮಾಜದ ಎಲ್ಲ ವಲಯಗಳಲ್ಲಿ ಕಾಣಬಹುದಿತ್ತು :

"ಬ್ರಾಹ್ಮಣರು ಅರ್ಚಕರಾಗಿ, ಮಂತ್ರಿಗಳಾಗಿ, ದಂಡನಾಯಕರಾಗಿ, ಆಡಳಿತಗಾರರಾಗಿ, ವ್ಯಾಪಾರಿಗಳಾಗಿ, ಭೂಮಾಲಿಕರಾಗಿ ಹಲವು ರೀತಿಯ ವೃತ್ತಿಗಳನ್ನವಲಂಬಿಸಿದ್ದರು. ನೂನಿಜ್‌ನ ಪ್ರಕಾರ ಅವರು ಪ್ರಾಮಾಣಿಕರು, ವ್ಯವಹಾರ ಕುಶಲರು, ಪ್ರತಿಭಾವಂತರು ಮತ್ತು ತೀಕ್ಷ್ಣಮತಿಗಳು, ಲೆಕ್ಕನಿಪುಣರು, ಜ್ಞಾನಿಗಳಾಗಿದ್ದರು. ಆದರೆ ಶ್ರಮದ ಕೆಲಸಕ್ಕೆ ಅನರ್ಹರಾಗಿದ್ದರು." ಸಮಾಜದಲ್ಲಿ ಅಸ್ಪೃಶ್ಯತೆ ಆಚರಣೆಯಲ್ಲಿತ್ತು. ಸ್ತ್ರೀಯರಿಗೆ ಸಮಾಜದಲ್ಲಿ ಗೌರವಯುತ ಸ್ಥಾನವಿತ್ತು. ಸಮಾಜದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಮಹಿಳೆಯರು ಪ್ರಮುಖ ಪಾತ್ರವಹಿಸುತ್ತಿದ್ದರು. ಸ್ತ್ರೀಯರಿಗೆ ಕುಸ್ತಿ, ಕತ್ತಿವರಸೆ, ಸಂಗೀತ, ನೃತ್ಯ ಮುಂತಾದ ಕಲೆಗಳಲ್ಲಿ ಶಿಕ್ಷಣವನ್ನು ಕೊಡಲಾಗುತ್ತಿತ್ತು. ನ್ಯೂನಿಜ್ ಹೇಳುವಂತೆ "ರಾಜಾಸ್ಥಾನದಲ್ಲಿ ಮಹಿಳಾ ಕುಸ್ತಿಪಟುಗಳು, ಜ್ಯೋತಿಷಿಗಳು, ಲೆಕ್ಕಾಧಿಕಾರಿಗಳು, ಕರಣಿಕರು ಮತ್ತು ರಕ್ಷಣಾಪಡೆಯವರು ಇದ್ದರು. ಕೆಲವರು ಸಾಹಿತ್ಯ, ಸಂಗೀತ, ನೃತ್ಯಗಳಲ್ಲಿ ವಿಶೇಷ ಪರಿಣತಿ ಹೊಂದಿದ್ದರು."[೨೨]

ರಾಜ್ಯದಲ್ಲಿ ದೇವದಾಸಿ ಪದ್ಧತಿ ಮತ್ತು ವೇಶ್ಯಾಪದ್ಧತಿಗಳು ರೂಢಿಯಲ್ಲಿದ್ದವು. ನಗರದಲ್ಲಿ ವೇಶ್ಯಾವಾಟಿಕೆಗಳಿದ್ದವು. ವೇಶ್ಯೆಯರ ಮೇಲೆ ತೆರಿಗೆಯನ್ನು ಹಾಕಲಾಗುತ್ತಿತ್ತು. ಏಕಪತ್ನಿತ್ವ ಸಾಮಾನ್ಯವಾಗಿದ್ದರೂ, ರಾಜರಲ್ಲಿ ಮತ್ತು ಶ್ರೀಮಂತ ವರ್ಗಗಳಲ್ಲಿ ಬಹುಪತ್ನಿತ್ವ ರೂಢಿಯಲ್ಲಿದ್ದಿತು. ಬಾಲ್ಯವಿವಾಹ, ವಿವಾಹ ವಿಚ್ಛೇದನ, ವಿಧವಾ ವಿವಾಹ ಮತ್ತು ವರದಕ್ಷಿಣೆ ಪದ್ಧತಿಗಳು ಸಾಮಾನ್ಯವಾಗಿದ್ದವು. ಸಹಗಮನ ಪದ್ಧತಿ ಬಹಳ ಪ್ರಚಲಿತದಲ್ಲಿತ್ತು. ಆದರೆ ಕಡ್ಡಾಯವಾಗಿರಲಿಲ್ಲ. ಮತ್ತು ಸತಿ ಹೋಗದ ವಿಧವೆಗೆ ಸಮಾಜದಲ್ಲಿ ಗೌರವಯುತ ಸ್ಥಾನವಿರಲಿಲ್ಲ. ಅವರನ್ನು ಮನೆಯಿಂದ ಹೊರಗೆ ಹಾಕುತ್ತಿದ್ದರು. ಸಣ್ಣ ವಯಸ್ಸಿನ ವಿಧವೆಗೆ ಅಲ್ಪಸ್ವಲ್ಪ ಮರುಕ ತೋರಿಸಿದಲ್ಲಿ ಅವರನ್ನು ದೇವಾಲಯದಲ್ಲಿ ದೇವದಾಸಿಯರನ್ನಾಗಿ ಬಿಡುತ್ತಿದ್ದರು. ಅವರು ದೇವಾಲಯದಲ್ಲಿ ನೃತ್ಯವನ್ನು ಮಾಡಿಕೊಂಡು ದೇವರ ಸೇವೆಯನ್ನು ಮಾಡಿಕೊಂಡು ಬದುಕುತ್ತಿದ್ದರು.

ಇಂದಿಗೂ ಸಹ ಬಳ್ಳಾರಿ ಹಾಗೂ ರಾಯಚೂರು ಪ್ರಾಂತ್ಯಗಳಲ್ಲಿ ದೇವದಾಸಿ ಪದ್ಧತಿಯು ಮುಂದುವರಿದಿದ್ದು ಕಂಡುಬರುವುದು. ಇದೊಂದು ಸಾಮಾಜಿಕ ಅನಿಷ್ಟ ಪದ್ಧತಿಯಾಗಿದೆ. ಜನರ ಮೂಢನಂಬಿಕೆಗಳು ಎಲ್ಲಿಯವರೆಗೆ ಹೋಗುವುದಿಲ್ಲವೋ ಅಲ್ಲಿಯವರೆಗೆ ಈ ದೇವದಾಸಿ ಪದ್ಧತಿಯು ಹೋಗಲಾರದು. ಇಂದಿಗೂ ಸಹ ರಾಜ್ಯದ ಹಲವಾರು ಕಡೆಗಳಲ್ಲಿ ದೇವದಾಸಿಯರು ಇರುವರು. ಇವರು ಸಮಾಜದಲ್ಲಿ ತುಂಬ ಕೆಳವರ್ಗದ ಜೀವನವನ್ನು ಸಾಗಿಸುತ್ತಿದ್ದಾರೆ. ಇಂದು ಸರ್ಕಾರ ಇವರಿಗಾಗಿ ಹಲವಾರು ಸೌಕರ್ಯವನ್ನು ಕಲ್ಪಿಸುತ್ತಿದೆ. ಆದರೂ ಸಹ ದೇವಗಾಸಿ ಪದ್ಧತಿಯನ್ನು ಕೊನೆಗಾಣಿಸಲು ಸಾಧ್ಯವಾಗಿಲ್ಲ.

ಬ್ರಾಹ್ಮಣರನ್ನು ಬಿಟ್ಟರೆ ಬೇರೆ ಜನಾಂಗದವರಿಗೆ ಆಹಾರದ ವಿಷಯದಲ್ಲಿ ನಿಷೇಧಗಳಿರಲಿಲ್ಲ. ಮಾಂಸಾಹಾರಿಗಳ ಸಂಖ್ಯೆ ಬಹಳವಿತ್ತು. ಆದರೆ ಹಸು, ಎತ್ತುಗಳ ಮಾಂಸವನ್ನು ತಿನ್ನುತ್ತಿರಲಿಲ್ಲ. ಆಕಳುಗಳನ್ನು ಪೂಜಿಸುತ್ತಿದ್ದರು. ದೇವರು ಅಥವಾ ದೇವತೆಯ ಮುಂದೆ ಬಲಿ ಕೊಡುವ ಪದ್ಧತಿ ರೂಢಿಯಲ್ಲಿತ್ತು. (ಈಗಲೂ ಕೂಡ ಕುರಿ, ಕೋಳಿಗಳನ್ನು ಬಲಿ ಕೊಡುತ್ತಾರೆ.) ನೂನಿಜ್‌ನ ಪ್ರಕಾರ ನವರಾತ್ರಿ ಹಬ್ಬದ ಕೊನೆಯ ದಿನ ಇಪ್ಪತ್ತೈದು ಕೋಣಗಳನ್ನು, ನಾಲ್ಕು ಸಾವಿರದ ಐದುನೂರು ಕುರಿಗಳನ್ನು ಬಲಿ ಕೊಡಲಾಗುತ್ತಿತ್ತು.

ಸಮಾಜದಲ್ಲಿ ಜೀತದಾಳಿನ ಪದ್ಧತಿಯು ಜಾರಿಯಲ್ಲಿತ್ತು. ಸಾಲಗಾರನು ಸಾಲವನ್ನು ಕೊಡುವವನ ಆಸ್ತಿಯಾಗಿದ್ದನು. ಜೀತದಾಳನ್ನು ಮನೆಯ ಮಗನಂತೆ ಉದಾರತೆಯಿಂದ ನೋಡಿಕೊಳ್ಳುತ್ತಿದ್ದರು.

ಅಬ್ದುಲ್ ರಜಾಕ್ ಸಾಮಾಜಿಕ ಜೀವನವನ್ನು ಮರೆತವನಲ್ಲ. ಅವನು ಅನೇಕ ಸಂಗತಿಗಳನ್ನು ಹೇಳುತ್ತಾನೆ. ತಾಂಬೂಲ ಅಥವಾ ವೀಳ್ಯದ ಬಗೆಗೆ ಅವನು ಕೊಡುವ ವಿವರಗಳು ಕುತೂಹಲಕಾರಿಯಾಗಿವೆ. ಮಧ್ಯಕಾಲೀನ ಸಾಮಾಜಿಕ ಜೀವನವನ್ನು ತಿಳಿಯಲು ಇವು ಸಹಕಾರಿಯಾಗಿವೆ. "ವೀಳೆಯದ ಎಲೆಯನ್ನು ಹಿಂದೂಸ್ಥಾನ, ಅರಬ್ ದೇಶದ ಬಹುಭಾಗ ಓರ್ಮ‌ಸ್ ರಾಜ್ಯ ಆ ಕಡೆಗಳ ಜನರು ಬಹಳ ಆಸೆಯಿಂದ ಉಪಯೋಗಿಸುತ್ತಾರೆ. ನಿಜವಾಗಿಯೂ ವೀಳ್ಯದೆಲೆಯಲ್ಲಿ ಒಳ್ಳೆಯ ಗುಣಗಳಿರುವುದರಿಂದ ಅದಕ್ಕೆ ಇಷ್ಟು ಪ್ರಾಶಸ್ತ್ಯ ಬಂದಿದೆ. ಇದನ್ನು ಉಪಯೋಗಿಸುವ ರೀತಿ ಹೀಗಿದೆ. ಸಿಪಾರಿ (ಸುಪಾರಿ) ಎಂದು ಕರೆಯುವ ಅಡಕೆಯನ್ನು ಸ್ವಲ್ಪ ಜಜ್ಜಿ ಬಾಯೊಳಗೆ ಹಾಕಿಕೊಳ್ಳುತ್ತಾರೆ. (ಇಂದಿಗೂ ಸಹ ಈ ರೀತಿ ತಿನ್ನುತ್ತಾರೆ.) ವೀಳ್ಯದೆಲೆಗೆ ಸುಣ್ಣವನ್ನು ಹಚ್ಚಿ ಸುರಳಿಮಾಡಿ ಬಾಯೊಳಿಟ್ಟು ಅಗಿಯುತ್ತಾರೆ. ಒಂದೊಂದು ಸಲ ನಾಲ್ಕಾರು ಎಲೆಗಳನ್ನು ಒಟ್ಟಿಗೆ ಬಾಯಲ್ಲಿಟ್ಟುಕೊಂಡು ಅಗಿಯುವುದುಂಟು. ಕೆಲವು ವೇಳೆ ಪಚ್ಚಕರ್ಪೂರ ಸೇರಿಸಿಕೊಳ್ಳುತ್ತಾರೆ. ವೀಳ್ಯದೆಲೆ ರಸವನ್ನು ಒಮ್ಮೊಮ್ಮೆ ಉಗಿಯುತ್ತಾರೆ. ಅದು ಕೆಂಪಾಗಿರುತ್ತದೆ. ವೀಳ್ಯದೆಲೆಯನ್ನು ಹಾಕಿಕೊಂಡಾಗ ಮುಖವು ಬಣ್ಣವೇರಿ ತೇಜಸ್ಸು ಕಾಣಿಸಿಕೊಳ್ಳುತ್ತದೆ. ದ್ರಾಕ್ಷಾರಸವನ್ನು

ಕುಡಿದರೆ ಬರುವಂಥ ಅಮಲು ಬರುತ್ತದೆ. ಹೊಟ್ಟೆ ತುಂಬ ಊಟಮಾಡಿದಾಗ ಎಲೆಯನ್ನು ಹಾಕಿಕೊಂಡರೆ ತಿಂದ ಆಹಾರವನ್ನು ಜೀರ್ಣ ಮಾಡುತ್ತದೆ. ಬಾಯಿಯ ವಾಸನೆಯನ್ನು ಹೋಗಲಾಡಿಸಿ, ಹಲ್ಲುಗಳಿಗೆ ಶಕ್ತಿಯನ್ನು ಕೊಡುತ್ತದೆ. ವೀಳ್ಯದೆಲೆ ಎಷ್ಟು ಬಲವರ್ಧಕ, ಎಷ್ಟು ಕಾಮೋತ್ತೇಜಕ ಎಂಬುದನ್ನು ವರ್ಣಿಸಲಾರೆ ಬಹುಶಃ ಈ ವೀಳ್ಯದೆಲೆಯ ಗುಣವೇ ಕಾರಣವಾಗಿರಬೇಕು. ಈ ದೇಶದ ದೊರೆ ತನ್ನ ಅಂತಃಪುರದಲ್ಲಿ ಲೆಕ್ಕವಿಲ್ಲದಷ್ಟು ಸ್ತ್ರೀಯರನ್ನು ಇಟ್ಟುಕೊಂಡಿರುವುದಕ್ಕೆ."[೩೨]

ಈಗಲೂ ಸಹ ಭಾರತದ ನಗರವಾಸಿಗಳು ಮತ್ತು ಗ್ರಾಮೀಣ ಜನರು ತಾಂಬೂಲ ಅಥವಾ ಎಲೆ, ಅಡಕೆಯನ್ನು ಮೆಲ್ಲುವ ಪರಿಪಾಠವನ್ನು ಇಟ್ಟುಕೊಂಡಿರುವರು. ಕೆಲವು ವಯಸ್ಸಾದ ಜನರು ಎಲೆ, ಅಡಕೆಯ ಚೀಲವನ್ನೇ ಇಟ್ಟುಕೊಂಡಿರುತ್ತಾರೆ. ಕೆಲವರಿಗೆ ಸದಾಕಾಲ ತಾಂಬೂಲ ತಿನ್ನುವ ಹವ್ಯಾಸವಿದ್ದರೆ, ಇನ್ನು ಕೆಲವರು ಊಟ ಮಾಡಿದಾಗ ಹಾಗೂ ಚಹಾ ಕುಡಿದಾಗ ಎಲೆ ತಿನ್ನುವ ರೂಢಿ ಇರುತ್ತದೆ. ಕೆಲವರು ಎಲೆ, ಅಡಕೆಯೊಂದಿಗೆ ಹೊಗೆಸೊಪ್ಪನ್ನು ಸಹ ಬಾಯಿಗೆ ಹಾಕಿಕೊಳ್ಳುತ್ತಾರೆ. ಅಂತೂ ಎಲೆ ತಿನ್ನುವ ಹವ್ಯಾಸ ಅಂದಿನಿಂದ ಇಂದಿನವರಿಗೂ ಪ್ರಚಲಿತದಲ್ಲಿರುವುದು ಗಮನಾರ್ಹ.

ಬಾರ್ಬೋಸಾ ಸಿಡಿಯಾಡುವ ಆಚರಣೆಯನ್ನು ಹಾಗೂ ಬೇಟೆಯಾಡುವ ವಿವರಗಳನ್ನು ನೀಡಿದ್ದಾನೆ. ಈ ವಿವರಗಳು ಸಮಕಾಲೀನ ಸಮಾಜದ ಮೇಲೆ ಬಹಳ ಪ್ರಭಾವ ಬೀರಿದೆ. ಈಗಲೂ ಸಹ ಬೇಟೆಯಾಡುವುದನ್ನು ಕಾಣಬಹುದು. ಸಿಡಿಯಾಡುವ ಸಂಪ್ರದಾಯವು ಇನ್ನು ಕೆಲವೊಂದು ಪ್ರದೇಶಗಳಲ್ಲಿ ಉಳಿದುಕೊಂಡು ಬಂದಿದೆ. ಉದಾಹರಣೆಗೆ - ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಇಟಗಿ ಹಾಗೂ ಸೂಡಿ ಗ್ರಾಮಗಳಲ್ಲಿ ಸಿಡಿಯಾಡುವ ಸಂಪ್ರದಾಯ ರೂಢಿಯಲ್ಲಿದೆ. (ಈ ಪ್ರದೇಶಗಳು ಚಾಲುಕ್ಯರ ಆಳ್ವಿಕೆಗೆ ಸಂಬಂಧಿಸಿದ ಪ್ರದೇಶಗಳಾಗಿದ್ದವು.)



ಡೊಮಿಂಗೊ ಪ್ಯಾಸ್ ಸಂಚೆ ಸಂತೆಯ ವಿವರಗಳನ್ನು ನೀಡಿದ್ದಾನೆ. ಅಲ್ಲಿ ನೀವು ಪ್ರತಿ ಸಂಚೆ ಸಂತೆಯೊಂದನ್ನು ನೋಡುವಿರಿ. ಅಲ್ಲಿ ಅವರು ಅನೇಕ ಸಾಮಾನ್ಯ ಕುದುರೆಗಳನ್ನು ತಟ್ಟು ಕುದುರೆಗಳನ್ನು ಮಾರಾಟ ಮಾಡುತ್ತಾರೆ. ಕುದುರೆ ವ್ಯಾಪಾರದ ಜೊತೆಗೆ ಅನೇಕ ತರಹದ ಹಣ್ಣುಗಳನ್ನು ತರಕಾರಿಗಳನ್ನು ಕಟ್ಟಿಗೆಗಳನ್ನು ಮಾರುತ್ತಾರೆ. ಕುರಿ ಮಾರುವ ಸ್ಥಳಗಳನ್ನು ಕುರಿಗಳ ಕಸಾಯಿಖಾನೆಯನ್ನು ಕುರಿತು ಬರೆಯುವ ಭಾಗಗಳು ಸಾಮಾಜಿಕ ಜೀವನದ ಜೀವಂತ ಭಾಗಗಳೇ ಆಗಿವೆ.

'ನಿಕೋಲೊ ಕೊಂಟಿ'ಯ ಪ್ರಕಾರ ಈ ಪ್ರದೇಶದ ನಿವಾಸಿಗಳು ತಮಗೆ ಇಷ್ಟ ಬಂದಷ್ಟು ಹೆಂಡಂದಿರನ್ನು ಮದುವೆಯಾಗುತ್ತಾರೆ. ಅವರನ್ನು ಅವರ ಮೃತ ಗಂಡಂದಿರ ಜೊತೆಯಲ್ಲಿ ಸುಡಲಾಗುತ್ತದೆ. ಅವರ ರಾಜನು ಭಾರತದ ಎಲ್ಲ ರಾಜರುಗಳಿಗಿಂತ ಪ್ರಬಲನಾಗಿರುವನು. ಅವನು ತನಗಾಗಿ ೧೨,೦೦೦ ಹೆಂಡಂದಿರನ್ನು ಮದುವೆಯಾಗಿದ್ದಾನೆ. ಅವರಲ್ಲಿ ೮,೦೦೦ ಜನರು ಅವನು ಹೋದೆಡೆಯಲ್ಲಾ ನಡೆದುಕೊಂಡೆ

ಅವನನ್ನು ಅನುಸರಿಸುತ್ತಾರೆ. ಮತ್ತು ಅಡಿಗೆ ಮನೆಯ ಸೇವೆಯಲ್ಲಿ ಮಾತ್ರ ತೊಡಗಿಸಲ್ಪಟ್ಟಿರುತ್ತಾರೆ. ಉಳಿದವರನ್ನು ಪುರುಷರು ಮೇಣೆಗಳಲ್ಲಿ ಹೊತ್ತು ತರುತ್ತಾರೆ. ಇದರಲ್ಲಿ ೨೦೦೦ ಅಥವಾ ೩೦೦೦ ಜನರನ್ನು ತನ್ನ ಮರಣ ಕಾಲಕ್ಕೆ ಅವರು ಸ್ವಂತ ಇಚ್ಛೆಯಿಂದ ಚಿತೆಯೇರಬೇಕೆಂಬ ಷರತ್ತಿಗೊಳಪಟ್ಟ ಹೆಂಡಂದಿರೆಂದು ಆಯ್ಕೆ ಮಾಡಲಾಗುತ್ತದೆ. ಅದು ಅವರಿಗೆ ದೊಡ್ಡ ಗೌರವವೆಂದು ಪರಿಗಣಿಸಲಾಗಿತ್ತು.

ಅವರು ಚಿತೆಯೇರಿದ ಒಂದು ವರ್ಷದೊಳಗೆ, ನಿರ್ದಿಷ್ಟ ಸಮಯಕ್ಕೆ ಅವರ ದೇವತಾ ಮೂರ್ತಿಯನ್ನು ಎರಡು ರಥಗಳ ಮಧ್ಯೆ ಇರಿಸಿ ನಗರದಲ್ಲಿ ಮೆರವಣಿಗೆಯೊಂದಿಗೆ ಒಯ್ಯಲಾಗುತ್ತದೆ. ಅವುಗಳಲ್ಲಿ ಸುಂದರವಾಗಿ ಅಲಂಕೃತರಾದ ತರುಣಿಯರಿದ್ದು ದೇವರ ನಾಮ ಹಾಡುತ್ತಾರೆ. ಮತ್ತು ರಥಗಳನ್ನು ಬೃಹತ್ ಜನಸಮೂಹ ಅನುಸರಿಸುತ್ತದೆ. ಭಕ್ತಿ ಆವೇಶಕ್ಕೊಳಗಾದ ಅನೇಕರು ಜಜ್ಜಿ ಮರಣವನ್ನು ಅಪ್ಪುವುದಕ್ಕಾಗಿ ಗಾಲಿಗಳ ಮುಂದೆ ನೆಲದ ಮೇಲೆ ಬೀಳುತ್ತಾರೆ. ದೇವರಿಗೆ ಈ ಮಾದರಿಯ ಮೃತ್ಯು ಸ್ವೀಕಾರಾರ್ಹವೆಂದು ಅವರು ಹೇಳುತ್ತಾರೆ. (ಇಂದಿಗೂ ಸಹ ರಥದ ಗಾಲಿಗಳ ಕೆಳಗೆ ಬೀಳುವ ಹರಕೆಗಳನ್ನು ಬಹಳ ಜನರು ಬೇಡಿಕೊಳ್ಳುತ್ತಾರ.)

ವಿಜಯನಗರ ಸಾಮ್ರಾಜ್ಯದ ಸರದಾರರು ವಿಲಾಸಿ ಜೀವನ ನಡೆಸುತ್ತಿದ್ದರು. ಸುಗಂಧ ದ್ರವ್ಯಗಳು, ಆಭರಣ, ವೀಳ್ಯದೆಲೆ, ಪುಷ್ಪಗಳು, ಮೇದೋತ್ತೇಜಕ ವಸ್ತುಗಳಿಗೆ ಭಾರಿ ಬೇಡಿಕೆಯಿತ್ತು. ಈ ರಾಜ್ಯದ ಜನತೆ ಗುಲಾಬಿ ಹೂಗಳ ಪ್ರಿಯರಾಗಿದ್ದು ಎಲ್ಲೆಲ್ಲೂ ಗುಲಾಬಿಯನ್ನು ಬೆಳೆಯಲಾಗುತ್ತಿತ್ತು. ಗುಲಾಬಿ ಹೂಗಳನ್ನು ಬಿಟ್ಟು ಜೀವನವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಗುಲಾಬಿಯು ಇವರ ಜೀವನದಲ್ಲಿ ಹಾಸುಹೊಕ್ಕಾಗಿತ್ತು. ಹೊಟ್ಟೆಗೆ ಹಿಟ್ಟು ಎಷ್ಟು ಮುಖ್ಯವೋ, ಜುಟ್ಟಿಗೆ ಗುಲಾಬಿಯು ಅಷ್ಟೇ ಮುಖ್ಯವಾಗಿತ್ತು.

ಹತ್ತಿಬಟ್ಟೆ ಹಾಗೂ ರೇಷ್ಮೆ ಉಡುಪುಗಳು ಬಳಕೆಯಲ್ಲಿದ್ದವು. ಕುಸ್ತಿ ಪಂದ್ಯ, ಜೂಜಾಟ, ಹುಂಜಗಳ ಕಾದಾಟ, ಪಗಡೆಯಾಟ, ಸಂಗೀತ, ನೃತ್ಯ ಮುಂತಾದವುಗಳು ಮನರಂಜನೆಯ ಸಾಧನಗಳಾಗಿದ್ದವು. ಸ್ತ್ರೀಯರು ಕೂಡ ಸರ್ಕಾರಿ ಸೇವೆಯಲ್ಲಿದ್ದರು. ವರದಕ್ಷಿಣೆ ಪದ್ಧತಿ, ಬಾಲ್ಯವಿವಾಹಗಳು ರೂಢಿಯಲ್ಲಿದ್ದವು.

ಹೀಗೆ ಬಲಿಷ್ಠ ಸಾಮ್ರಾಜ್ಯವಾಗಿ ಮೆರೆಯುತ್ತಿದ್ದ ವಿಜಯನಗರ ಸಾಮ್ರಾಜ್ಯಕ್ಕೆ ಅಂದು ಭೇಟಿ ನೀಡಿದ ಯಾತ್ರಿಕರು ತಾವು ಕಂಡಂತೆ ತಮ್ಮ ಬರಹಗಳಲ್ಲಿ ನಿರೂಪಿಸಿದ್ದಾರೆ. ಅವರ ಬರವಣಿಗೆಗಳು ಇಲ್ಲದೆ ಹೋಗಿದ್ದರೆ ಈ ಸಾಮ್ರಾಜ್ಯದ ಸಾಂಸ್ಕೃತಿಕ ಸ್ವರೂಪವನ್ನು ಅರಿಯಲು ಸಾಧ್ಯವಾಗುತ್ತಿರಲಿಲ್ಲ. ರಾಜಕೀಯವಾಗಿ, ಸಾಹಿತ್ಯಿಕವಾಗಿ, ಭಾಷಿಕವಾಗಿ ರಾಜಧಾನಿಯು ಅತ್ಯಂತ ಪ್ರಬಲವಾಗಿದ್ದು ದಕ್ಷ ರಾಜರು, ಕವಿಗಳು ಸಾಮ್ರಾಜ್ಯದಲ್ಲಿದ್ದರು. ಹಲವಾರು ಭಾಷೆಗಳನ್ನು ಬಲ್ಲ ವಿದ್ವಾಂಸರು ರಾಜಧಾನಿಯಲ್ಲಿದ್ದರು. ಸಮಾಜದಲ್ಲಿ ಕೆಲವೊಂದು ಅನಿಷ್ಟ ಸಂಪ್ರದಾಯಗಳನ್ನು ಬಿಟ್ಟರೆ ಸಾಮಾಜಿಕ ಜೀವನ ಉತ್ತಮವಾಗಿತ್ತು. ಧಾರ್ಮಿಕವಾಗಿಯೂ ಸಮನ್ವಯತೆಯನ್ನು ಸಾಧಿಸಲಾಗಿತ್ತು. ರಾಜಧಾನಿಯಲ್ಲಿ ಹಲವಾರು ಭಾಷೆಗಳನ್ನಾಡುವ ಜನರು ಪರಸ್ಪರ ಸೌಹಾರ್ದ ಮನೋಭಾವನೆಯಿಂದ ವಾಸಿಸುತ್ತಿದ್ದರು.

ವಿಜಯನಗರ ಸಾಮ್ರಾಜ್ಯವು ಹಿಂದೂ ಧರ್ಮ ಹಾಗೂ ಸಂಸ್ಕೃತಿಯನ್ನು ರಕ್ಷಿಸಿ, ಪೋಷಿಸಿತು. ಪರಕೀಯರ ಆಕ್ರಮಣದಿಂದ ಘಾಸಿಗೊಂಡಿದ್ದ ದಕ್ಷಿಣ ಭಾರತದ ಹಿಂದೂ ಜನಾಂಗಕ್ಕೆ ಅಭಯ, ಶಾಂತಿ, ನೆಮ್ಮದಿ ಮತ್ತು ಸಮೃದ್ಧಿಗಳನ್ನು ಒದಗಿಸಿತು. ದಕ್ಷಿಣ ಭಾರತದ ಸಕಲ ಭಾಷೆ, ಕಲೆ, ವಿದ್ಯೆ ಮತ್ತು ಸಾಹಿತ್ಯಗಳ ಅಭಿವೃದ್ಧಿಗೆ ಅವಕಾಶ ಒದಗಿಸಿತು. ಹೀಗೆ ದಕ್ಷಿಣ ಭಾರತದ ಸಾಂಸ್ಕೃತಿಕ ಸಮನ್ವಯವನ್ನು ಸಾಧಿಸಿತು. ವಿಜಯನಗರದ ಸಾಮ್ರಾಟರು ಪಾಲಿಸಿದ ಪರಧರ್ಮ ಸಹಿಷ್ಣುತೆಯ ನೀತಿಯು ಸರ್ವಕಾಲಕ್ಕೂ ಅನುಕರಣೀಯವಾಗಿದೆ.

ಒಟ್ಟಾರೆ ವಿಜಯನಗರವು ವಿಶ್ವದ ಬೃಹತ್ ನಗರಗಳಲ್ಲಿ ಒಂದಾಗಿದ್ದು, ಪ್ರಸಿದ್ಧ ವಾಣಿಜ್ಯ ನಗರ ಎನಿಸಿಕೊಂಡಿತ್ತು. ಇಲ್ಲಿಯ ಭಾಷಿಕ, ಸಾಹಿತ್ಯಕ, ರಾಜಕೀಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಕಂಡ ವಿದೇಶಿ ಯಾತ್ರಿಕರು ಅಚ್ಚರಿಯಿಂದ ವರ್ಣಿಸಿರುವುದಲ್ಲದೆ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿನ ಕೆಲವು ದೋಷಗಳನ್ನು ಎತ್ತಿ ತೋರಿಸಿದ್ದಾರೆ. ಸತಿ ಪದ್ಧತಿ, ದೇವದಾಸಿ ಪದ್ಧತಿ, ವೇಶ್ಯಾ ಪದ್ಧತಿ, ಗುಲಾಮ ಪದ್ಧತಿ ಹಾಗೂ ಬಲಿ ಪದ್ಧತಿಗಳು ಅಂದಿನ ಸಾಮಾಜಿಕ ಪಿಡುಗುಗಳಾಗಿದ್ದವು. ಇವುಗಳನ್ನು ಯಾರೂ ತಡೆಯದಿರುವುದು ವಿಪರ್ಯಾಸದ ಸಂಗತಿ. ಬಹುಶಃ ಯಾರಾದರೂ ಈ ಆಚರಣೆಗಳನ್ನು ತಡೆಯಲು ಪ್ರಯತ್ನಿಸಿದ್ದರೂ ಸಹ ಅವು ನಿಲ್ಲುವ ಹಾಗಿರಲಿಲ್ಲ. ಏಕೆಂದರೆ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಅವುಗಳು ಮೌಲ್ಯಗಳಾಗಿ ಪರಿಣಮಿಸಿದ್ದವು. ಸಾಮಾಜಿಕ ವ್ಯವಸ್ಥೆಯಲ್ಲಿನ ದೋಷಗಳನ್ನು ಬಿಟ್ಟರೆ ಉಳಿದಂತೆ ಸಾಮ್ರಾಜ್ಯವು ಸಾಹಿತ್ಯಿಕವಾಗಿ, ರಾಜಕೀಯವಾಗಿ ಮತ್ತು ಧಾರ್ಮಿಕವಾಗಿ ಹೆಚ್ಚು ಸುಸ್ಥಿತಿಯಲ್ಲಿತ್ತೆಂದು ವಿಜಯನಗರ ಸಂದರ್ಶಕರ ವಿವರಣೆಯಿಂದ ತಿಳಿದುಬರುವುದು. ರಾಜ್ಯದಲ್ಲಿ ಆಳುವ ಅರಸರು ಮಾಡಿದ ಯುದ್ಧ, ವಿಜಯ, ಸಾಮ್ರಾಜ್ಯ ವಿಸ್ತರಣೆ, ಸೇರಿಸಿದ ಸಂಪತ್ತು, ಸೈನ್ಯ ಇತ್ಯಾದಿ ಬದುಕಿನ ಬಗೆಗೆ ಹಲವಾರು ಮಹತ್ವದ ವಿಚಾರಗಳನ್ನು ತಿಳಿಯಬಹುದು. ರಾಜ್ಯದ ಉನ್ನತಿಗೆ ತಮ್ಮನ್ನೇ ತಾವು ಅರ್ಪಿಸಿಕೊಂಡ ವೀರ ಸೈನಿಕರು, ಹೋರಾಟದಲ್ಲಿ ಸತ್ತ ಸೈನಿಕರ ಹೆಂಡತಿಯರು ಮಹಾಸತಿಯರಾದುದು, ಕೋಟೆ ಕಟ್ಟಿದವರು, ಕಾವಲುಗಾರರು, ದೇವಾಲಯ ನಿರ್ಮಿಸಿದವರು ಇತ್ಯಾದಿ ಸೇವೆ ಸಲ್ಲಿಸಿದ ಜನಸಾಮಾನ್ಯರ ಸಾಂಸ್ಕೃತಿಕ ಬದುಕು ಸಹ ಅಷ್ಟೇ ಮುಖ್ಯವಾಗಿದೆ. ಉತ್ಖನನದಿಂದ ಅಭಿವೃದ್ಧಿಗೊಂಡು ಇಂದು ವಿಶ್ವಪರಂಪರೆಯ ಸ್ಮಾರಕಗಳ ಸಾಲಿಗೆ ಸೇರಲು ಸಾಧ್ಯವಾದ ಹಂಪೆಯು, ಮಧ್ಯಕಾಲೀನ ಭಾರತದ ಕರ್ನಾಟಕ ಇತಿಹಾಸ, ಸಂಸ್ಕೃತಿ, ವಿಜ್ಞಾನ ಹಾಗೂ ಶಿಲ್ಪಕಲೆಯನ್ನು ಸಂಶೋಧನೆ ಮಾಡುವವರಿಗೆ ಯೋಗ್ಯ ಸ್ಥಳವಾಗಿದೆ.

## ಕೊನೆ ಟಿಪ್ಪಣಿಗಳು

೧. ಶಿವರುದ್ರಸ್ವಾಮಿ ಎಸ್.ಎನ್., : *ಕರ್ನಾಟಕದ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ*, ಪು. ೨೧೫.

೨. ಅದೇ., ಪು. ೨೧೫.

೩. ಸದಾನಂದ ಕನವಳ್ಳಿ : *ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ*, ಪು. ೨೨.

೪. ಶಿವರುದ್ರಸ್ವಾಮಿ ಎಸ್.ಎನ್., : *ಕರ್ನಾಟಕದ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ*, ಪು. ೨೧೬.

೫. ಜೋಶಿ ಡಿ.ಟಿ., : *ಭಾರತದ ಇತಿಹಾಸ*, ಪು. ೧೩೬.

೬. ಶಿವರುದ್ರಸ್ವಾಮಿ ಎಸ್.ಎನ್., : *ಕರ್ನಾಟಕದ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ*, ಪು. ೨೬೭.

೭. ಜೋಶಿ ಡಿ.ಟಿ., : *ಭಾರತದ ಇತಿಹಾಸ*, ಪು. ೧೬೯.

೮. ಶಿವರುದ್ರಸ್ವಾಮಿ ಎಸ್.ಎನ್., : *ಕರ್ನಾಟಕದ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ*, ಪು. ೨೬೮.

೯. ಸದಾನಂದ ಕನವಳ್ಳಿ : *ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ*, ಪು. ೨೩೦.

೧೦. ಅದೇ., ಪು. ೨೪೫.

೧೧. ಅದೇ., ಪು. ೨೪೬.

೧೨. ಅದೇ., ಪು. ೨೪೮.

೧೩. ಅದೇ., ಪು. ೨೫೩.

೧೪. ಅದೇ., ಪು. ೨೪೫-೨೫೫.

೧೫. ಅದೇ., ಪು. ೧.

೧೬. ಸೋಮಶೇಖರ ಎಸ್.ವೈ., : *ಹಂಪೆಯ ಬಜಾರುಗಳು*, ಪು. ೪.

೧೭. ಬಾಲಸುಬ್ರಹ್ಮಣ್ಯ : *ಮರೆಯಲಾಗದ ಮಹಾಸಾಮ್ರಾಜ್ಯ*, ಪು. ೧೫.

೧೮. ಪಾಲಾಕ್ಷ : *ಸಮಗ್ರ ಕನ್ನಡ ಇತಿಹಾಸ ಮತ್ತು ಸಂಸ್ಕೃತಿ*, ಪು. ೧೦೦.

೧೯. ಜೋಶಿ ಡಿ.ಟಿ., : *ಭಾರತದ ಇತಿಹಾಸ*, ಪು. ೧೬೯.

೨೦. ಡಾ. ತಿಪ್ಪೇರುದ್ರಸ್ವಾಮಿ ಎಚ್., (ಸಂ.) : *ಕರ್ನಾಟಕ ಇತಿಹಾಸ*, ಪು. ೩೦೪.

೨೧. ಅದೇ., ಪು. ೩೦೫.

೨೨. ಜೋಶಿ ಡಿ.ಟಿ., : *ಭಾರತದ ಇತಿಹಾಸ*, ಪು. ೧೬೪.

೨೩. ಪಾಲಾಕ್ಷ : *ಸಮಗ್ರ ಕನ್ನಡ ಇತಿಹಾಸ ಮತ್ತು ಸಂಸ್ಕೃತಿ*, ಪು. ೧೦೦-೧೦೧.

೨೪. ಷೇಕ್‌ಅಲಿ : ಸಂಪುಟ ಸಂ. ಶಿವಣ್ಣ ಕೆ.ಎಸ್., *ಕರ್ನಾಟಕ ಚರಿತ್ರೆ*, ಪು.೧೧೭.

೨೫. ಪಾಲಾಕ್ಷ : *ಸಮಗ್ರ ಕನ್ನಡ ಇತಿಹಾಸ ಮತ್ತು ಸಂಸ್ಕೃತಿ*, ಪು. ೧೧೭.

೨೬. ಷೇಕ್‌ಅಲಿ : ಸಂಪುಟ ಸಂ. ಶಿವಣ್ಣ ಕೆ.ಎಸ್., *ಕರ್ನಾಟಕ ಚರಿತ್ರೆ*, ಪು.೩೪೭.

೨೭. ಅದೇ., ಪು. ೩೫೦.

೨೮. ಅದೇ., ಪು. ೩೫೦.

೨೯. ಅದೇ., ಪು. ೩೫೧.

೩೦. ಅದೇ., ಪು. ೩೫೨.

೩೧. ಅದೇ., ಪು. ೩೫೦.

೩೨. ಅದೇ., ಪು. ೩೫೫.

* * * *

ಅಧ್ಯಾಯ ೪

## ಅಧ್ಯಯನದಿಂದ ಫಲಿತವಾದ ಸಾಂಸ್ಕೃತಿಕ ವಿವರಗಳು

ಗಳಗನಾಥರ ಕನ್ನಡಿಗರ ಕರ್ಮಕತೆ, ಸದಾನಂದ ಕನವಳ್ಳಿಯವರ ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಬಾಲಸುಬ್ರಹ್ಮಣ್ಯರವರ ಮರೆಯಲಾಗದ ಮಹಾಸಾಮ್ರಾಜ್ಯ ಈ ಮೂರು ಭಾಷಾಂತರ ಕೃತಿಗಳನ್ನು ಹಾಗೂ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿರುವ ಇನ್ನಿತರ ಕೃತಿಗಳನ್ನು ಅಧ್ಯಯನ ಮಾಡುವುದರ ಮೂಲಕ ಸಾಂಸ್ಕೃತಿಕ ವಿವರಗಳನ್ನು ಗುರುತಿಸುವುದೇ ಪ್ರಸ್ತುತ ಅಧ್ಯಾಯದ ಕಾರ್ಯವಾಗಿದೆ.

ವಿಜಯನಗರ ಸಾಮ್ರಾಜ್ಯವನ್ನು ಕುರಿತು ಹಲವಾರು ವಿದ್ವಾಂಸರು ಹಾಗೂ ಇತಿಹಾಸಕಾರರು ಐತಿಹಾಸಿಕವಾಗಿ ಅಧ್ಯಯನವನ್ನು ನಡೆಸಿರುವರೇ ವಿನಃ ಸಾಂಸ್ಕೃತಿಕ ಅಧ್ಯಯನಗಳು ಮಾಡಿರುವುದಿಲ್ಲ. ಹಾಗಾಗಿ ವಿಜಯನಗರ ಸಾಮ್ರಾಜ್ಯವು ಸಾಂಸ್ಕೃತಿಕವಾಗಿ ತನ್ನತನವನ್ನು ಉಳಿಸಿಕೊಂಡು ಹೇಗೆ ಆದರ್ಶರಾಜ್ಯ ಎನಿಸಿಕೊಂಡಿತ್ತು ಎಂಬುದನ್ನು ಅರಿತುಕೊಳ್ಳಬೇಕಾಗಿದೆ. ಈ ಸಾಮ್ರಾಜ್ಯದ ಅಧ್ಯಯನವು ಕೇವಲ ಗತಕಾಲದ ಬದುಕಿನ ಅಧ್ಯಯನವಲ್ಲ. ಇಂದು ಐತಿಹಾಸಿಕವಾಗಿ ಅಧ್ಯಯನ ಮಾಡುವುದಕ್ಕಿಂತ ಸಾಂಸ್ಕೃತಿಕವಾಗಿ ಅಧ್ಯಯನ ಮಾಡುವುದು ಅಗತ್ಯವಾಗಿದೆ.

"ವಿಜಯನಗರ ಸಾಮ್ರಾಜ್ಯದ ಅರಸರು ತಮ್ಮ ಕಾಲದಲ್ಲಿ ಆಸ್ಟ್ರೀಯಾಕ್ಕಿಂತಲೂ ಬಹುದೊಡ್ಡ ಸಾಮ್ರಾಜ್ಯದ ಭಾಗ್ಯವನ್ನು ನಿರ್ವಹಿಸಿದರು ಮತ್ತು ಆ ನಗರ ಆಕಾರದಲ್ಲೂ ಸಮೃದ್ಧಿಯಲ್ಲೂ ಅದ್ಭುತವಾಗಿತ್ತೆಂದು, ಅದರ ಶ್ರೀಮಂತಿಕೆ ಮತ್ತು ಭವ್ಯತೆಯನ್ನು ಯಾವುದೇ ಪಾಶ್ಚಾತ್ಯ ರಾಜಧಾನಿಯು ಹೋಲುವಂತಿರಲಿಲ್ಲವೆಂದು ಹದಿನೈದನೆಯ ಮತ್ತು ಹದಿನಾರನೆಯ ಶತಮಾನಗಳ ಐರೋಪ್ಯ ಪ್ರವಾಸಿಗರ ಪರಂಪರೆಯೇ ವರ್ಣಿಸಿದೆ. ಪಶ್ಚಿಮ ಕರಾವಳಿಯಲ್ಲಿ ಜರುಗಿದ ಪೋರ್ಚುಗೀಸರ ಬಹುತೇಕ ಎಲ್ಲ ಯುದ್ಧಗಳು ಅದರ ಕಡಲು ವ್ಯಾಪಾರವನ್ನು ಪಡೆದುಕೊಳ್ಳುವ ಉದ್ದೇಶ ಹೊಂದಿದ್ದವೆಂಬುದು ಹಾಗೂ ಆ ಸಾಮ್ರಾಜ್ಯ ೧೫೬೫ರಲ್ಲಿ ಅವನತಿ ಹೊಂದಿದಾಗ ಅದರೊಂದಿಗೆ ಪೋರ್ಚುಗೀಸ ಗೋವಾದ ಸಮೃದ್ಧಿಯು ಪುನಃ ಏಳದಂತೆ ಮಣ್ಣು ಪಾಲಾಯಿತು."[೧] ಈ ವಿಷಯವು ಇಡೀ ಸಾಮ್ರಾಜ್ಯದ ಮಹತ್ವವನ್ನು ತಿಳಿಸುವ ಅಂಶವಾಗಿದೆ. ಏಕೆಂದರೆ ವಿಜಯನಗರ ಸಾಮ್ರಾಜ್ಯದ ಅರಸರು ವಿದೇಶದಿಂದ ಹಲವಾರು ಮುತ್ತು, ರತ್ನ,

ವಜ್ರ, ವೈಢೂರ್ಯಗಳನ್ನು ಹಾಗೂ ಬೆಲೆಬಾಳುವ ವಸ್ತುಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ಇಂತಹ ಮಹಾಸಾಮ್ರಾಜ್ಯ ಮಣ್ಣುಗೂಡಿದಾಗ ಇತರ ವಿದೇಶಗಳ ಸಂಪತ್ತು ಸಹ ನಾಶವಾಯಿತು.

ವಿಜಯನಗರ ಕಾಲದ ಅತ್ಯುತ್ತಮವಾದ ಶಿಲ್ಪಕಲಾ ಮತ್ತು ವಾಸ್ತುಶಿಲ್ಪದ ವೈಭವವನ್ನು ಕಣ್ಣಾರೆ ಕಾಣಬೇಕಾದರೆ ಪ್ರತಿಯೊಬ್ಬ ಪ್ರವಾಸಿಗನು ಹಂಪೆಯ ದೇವಾಲಯಗಳನ್ನು ವೀಕ್ಷಿಸಲೇಬೇಕು. ವಿಜಯನಗರದ ಅರಸರ ಪ್ರೋತ್ಸಾಹದಿಂದಲೂ, ಔದಾರ್ಯದಿಂದಲೂ ಅನೇಕ ದೇವಾಲಯಗಳಿಗೆ ಹೊಸ ಹೊಸ ರೀತಿಯ ಭವ್ಯ ಮಂಟಪಗಳನ್ನು ಮೊಗಶಾಲೆಗಳನ್ನು ನಿರ್ಮಿಸಲಾಯಿತು. ಈ ಅರಸರು ಕೇವಲ ತಮ್ಮ ಸಾಮ್ರಾಜ್ಯದಲ್ಲಿ ಅಷ್ಟೇ ಅಲ್ಲ, ಇನ್ನಿತರ ರಾಜ್ಯದಲ್ಲೂ ದೇವಾಲಯಗಳ ನಿರ್ಮಾಣಕ್ಕೆ ದಾನದತ್ತಿಗಳನ್ನು ಕೊಟ್ಟಿದ್ದರು. ಹಂಪಿಯಲ್ಲಿ ಅಷ್ಟೇ ಅಲ್ಲದೆ ಚಿದಂಬರಂ, ಮಧುರೈ, ಕಾಂಚಿಪುರಂ ನಗರಗಳನ್ನು ಉದಾಹರಿಸಬಹುದು.

ಈ ಅರಸರ ಕಾಲದಲ್ಲಿ ಕರ್ನಾಟಕ ಸಂಗೀತ ಶೈಲಿಯು ಶಾಸ್ತ್ರಬದ್ಧವಾಗಿ ರೂಪುಗೊಂಡಿತು. ಅಲ್ಲದೆ ಇದರಿಂದ ಕನ್ನಡ ಮತ್ತು ತೆಲುಗು ಸಾಹಿತ್ಯದ ಬೆಳವಣಿಗೆ ಹೆಚ್ಚು ಗಂಭೀರವಾಗಿ ನಡೆಯಿತು.

ವಿಜಯನಗರ ಸಾಮ್ರಾಜ್ಯವು ನಾಲ್ಕು ರಾಜ ಸಂತತಿಗಳನ್ನು ಕಂಡಿದ್ದು, ಹದಿನೇಳು ರಾಜರುಗಳು ಇಲ್ಲಿ ಆಳ್ವಿಕೆಯನ್ನು ನಡೆಸಿದ್ದಾರೆ. ಸಂಗಮ, ಸಾಳುವ, ತುಳುವ ಮತ್ತು ಅರವೀಡು ಸಂತತಿಗಳು ೨೩೦ ವರ್ಷಗಳ ಕಾಲ ಆಡಳಿತ ನಡೆಸಿದರು. ಇವರಲ್ಲಿ ಸಂಗಮ ಸಂತತಿಯ ಇಮ್ಮಡಿ ದೇವರಾಯ ಹಾಗೂ ತುಳುವ ಸಂತತಿಯ ಕೃಷ್ಣದೇವರಾಯ ವಿಜಯನಗರವನ್ನಾಳಿದ ಅರಸರಲ್ಲಿ ಅತ್ಯಂತ ಬಲಿಷ್ಠರು ಹಾಗೂ ಖ್ಯಾತಿವಂತರು. ಶ್ರೀಕೃಷ್ಣದೇವರಾಯನ ಕಾಲವಂತೂ ಸುಖಸಮೃದ್ಧಿಯ ಪರ್ವಕಾಲವಾಗಿತ್ತು. ಈ ಕಾಲದಲ್ಲಿ ಸಾಹಿತ್ಯ, ಕಲೆ, ಸಂಸ್ಕೃತಿಗಳ ಸುವರ್ಣಯುಗ ಎಂದು ಎನಿಸಿಕೊಂಡಿತ್ತು. ೧೫೬೫ರಲ್ಲಿ ಸಾಮ್ರಾಜ್ಯದ ಪತನಾನಂತರ ಏಳು ಜನ ಆಳಿದುಳಿದ ಪ್ರಾಂತ್ಯಗಳ ಮೇಲೆ ಹೆಸರಿಗೆ ಮಾತ್ರ ರಾಜರಾಗಿ ಅಧಿಕಾರ ನಡೆಸಿದರು. ಆದರೆ ಇಂದು ಹಂಪೆ ರಾಜರಿಲ್ಲದೆ ಅರಾಜಕವಾಗಿದೆ.

ವಿಜಯನಗರದ ಅರಸರೆಲ್ಲರೂ ಸಾಹಿತ್ಯ, ಸಂಗೀತ ಮತ್ತು ಇತರ ಕಲೆಗಳ ಉದಾರ ಪೋಷಕರಾಗಿದ್ದರು. ಈ ಸಾಮ್ರಾಜ್ಯದ ಅವಧಿಯಲ್ಲಿ "ಕನ್ನಡ ಸಾಹಿತ್ಯವನ್ನು ಗದ್ಯ ಪದ್ಯ ಮಿಶ್ರಿತವಾದ ಚಂಪು, ವಚನ, ಸಾಂಗತ್ಯ, ರಗಳೆ, ಷಟ್ಪದಿ, ತ್ರಿಪದಿ ಮೊದಲಾದ ಛಂದೋಶೈಲಿಗಳ ಕಾವ್ಯಗಳು ರಚನೆಗೊಂಡು ಸಾಹಿತ್ಯ ಕ್ಷಿತಿಜವನ್ನು ಶ್ರೀಮಂತಗೊಳಿಸಿದವು. ಜೈನ ಸಾಹಿತ್ಯದ ಪ್ರಭಾವವು ಈ ಅವಧಿಯಲ್ಲಿ ಕಡಿಮೆಯಾಗುತ್ತಿದ್ದರೂ ಎಂದಿನಂತೆಯೇ ಸಾಹಿತ್ಯ ರಚನೆ ಮುಂದುವರಿಯಿತು."[೨]

"ವೀರಶೈವ ಕೊಡುಗೆಯಂತೂ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಬಹುಮುಖ್ಯವಾಗಿದ್ದುದಲ್ಲದೆ ಪ್ರತಿಭಾವಂತ ಗ್ರಂಥಕರ್ತರು, ಕವಿಗಳು ಬಹುಸಂಖ್ಯೆಯಲ್ಲಿ ರಾಜಾಶ್ರಯವನ್ನು ಪಡೆದಿದ್ದರು. ಪಾಲ್ಕುರಿಕೆ ಸೋಮನಾಥನು ತೆಲುಗಿನಲ್ಲಿ ಬರೆದ 'ಬಸವ ಪುರಾಣ'ವನ್ನು ಭೀಮಕವಿಯು ಭಾಮಿನಿ ಷಟ್ಪದಿಯಲ್ಲಿ

ಕನ್ನಡೀಕರಣಗೊಳಿಸಿರುವನು. ಹದಿನೈದನೆಯ ಶತಮಾನದಲ್ಲಿ ವೀರಶೈವ ಸಾಹಿತ್ಯದಲ್ಲಿ ಹೆಸರುಗೊಂಡ ಕವಿ ಶ್ರೇಷ್ಠರಲ್ಲಿ 'ಪ್ರಭುಲಿಂಗ ಲೀಲೆ'ಯೆಂಬ ಅತ್ಯುತ್ತಮ ಗ್ರಂಥವನ್ನು ಬರೆದ ಚಾಮರಸನು ಇಮ್ಮಡಿ ದೇವರಾಯನ ಆಪ್ತಸ್ನೇಹಿತ ಮತ್ತು ಆಸ್ಥಾನ ಕವಿಯಾಗಿದ್ದನು. ಈ ಗ್ರಂಥವು ಅಲ್ಲಮಪ್ರಭು (ವಚನಕಾರರು)ವಿಗೆ ಸಂಬಂಧಿಸಿದ್ದು ಈ ಗ್ರಂಥವನ್ನು ದೇವರಾಯನು ತೆಲುಗು ಭಾಷೆಗೆ ಭಾಷಾಂತರ ಮಾಡಿಸಿದನು."[೩]

ವಿಜಯನಗರ ಸಾಮ್ರಾಜ್ಯವು ಸಕಲ ಸಂಪತ್ತು ಸಮೃದ್ಧಿಯಿಂದ ತುಂಬಿತುಳುಕುವ ಸಾಮ್ರಾಜ್ಯವಾಗಲು ಕಾರಣ ಇಲ್ಲಿಯ ಜನತೆ ಕೆರೆ ನೀರಾವರಿ, ಕಾಲುವೆ ನೀರಾವರಿ ಮತ್ತು ನದಿ ನೀರಾವರಿಗಳನ್ನು ಬಳಸಿಕೊಂಡು ಚಿನ್ನದ ಬೆಳೆಯನ್ನು ಬೆಳೆಯುತ್ತಿದ್ದರು. ಇದರಿಂದಾಗಿ ರಾಜ್ಯದ ಬೊಕ್ಕಸ ತುಂಬಿ ತುಳುಕುತ್ತಿದ್ದಿತು. ಆರ್ಥಿಕವಾಗಿ ಪ್ರಬಲವಾಗಿದ್ದು ಯಾವ ಕೊರತೆಯು ಕಂಡು ಬರಲಿಲ್ಲ.

ವಿದೇಶೀ ಯಾತ್ರಿಕ "ಡೊಮಿಂಗೊ ಪಯಾಸ್ ಕಂಡಿರುವಂತೆ ರಾಜನು ಕೆರೆಯನ್ನು ನಿರ್ಮಿಸಲಿಕ್ಕಾಗಿ ಒಂದು ದೊಡ್ಡ ಗುಡ್ಡವನ್ನೇ ಒಡೆಸಿ ಹಾಕಿಸಿದನಂತೆ. ಕೆರೆಯ ಕೆಲವೊಂದು ಭಾಗಗಳನ್ನು ಅಗೆದು ನಿರ್ಮಿಸಲು ರಾಜನು ತನ್ನ ಸರದಾರರ ಜವಾಬ್ದಾರಿಗೆ ಒಪ್ಪಿಸಿದನಂತೆ. ಕೆರೆಯು, ಎರಡು-ಮೂರು ಬಾರಿ ಒಡೆದಿದ್ದರಿಂದ ಏಕೆ ಒಡೆಯಿತೆಂದು ರಾಜನು ಬ್ರಾಹ್ಮಣರಿಗೆ ಕೇಳಲು ಅವರು ದೇವರು ಮುನಿದಿರುವನು ಅದಕ್ಕಾಗಿ ನರರ, ಎಮ್ಮೆಗಳ ಮತ್ತು ಕುದುರೆಗಳ ಬಲಿಯನ್ನು ಕೊಡಬೇಕೆಂದು ಹೇಳಿದರು. ಇದನ್ನು ಕೇಳಿದ ಕೂಡಲೇ ರಾಜನು ಗುಡಿಯ ಬಾಗಿಲಿನಲ್ಲಿ ಅರವತ್ತು ಮನುಷ್ಯರ ಹಾಗೂ ಹಲವಾರು ಕುದುರೆ ಮತ್ತು ಎಮ್ಮೆಗಳ ತಲೆಗಳನ್ನು ಕಡಿಯಬೇಕೆಂದು ಆಜ್ಞಾಪಿಸಿದ ಅದನ್ನು ಕೂಡಲೇ ಪೂರೈಸಲಾಯಿತು."[೪]

ಅ ಅವಧಿಯಲ್ಲಿ ಲಕ್ಷಾಂತರ ಜನರು ಬದುಕಬೇಕಾದರೆ ಮೂಲ ಆವಶ್ಯಕ ವಸ್ತುವಾದ ನೀರನ್ನು ಸಂಗ್ರಹಿಸುವ ಕೆರೆಯನ್ನು ನಿರ್ಮಿಸಲು ಬಲಿದಾನ ಮಾಡುವುದು ಅನಿವಾರ್ಯವಾಗಿತ್ತು. ಆದರೆ ಪ್ರಾಣಿಗಳ ಜೊತೆಗೆ ನರಬಲಿ ಕೊಡುವುದು ಅಮಾನುಷವಾದುದು. ಇದೇ ರೀತಿ ಯಾವುದೇ ಸೌಧದ ಕಟ್ಟಡವು ನಿಲ್ಲದಿದ್ದಾಗಲೂ ಜೀವಂತ ವ್ಯಕ್ತಿಗಳನ್ನು ಕಟ್ಟಡದಲ್ಲಿ ನಿಲ್ಲಿಸಿಯೋ ಅಥವಾ ಮಲಗಿಸಿಯೋ ಕಟ್ಟಡವನ್ನು ನಿರ್ಮಿಸುತ್ತಿದ್ದರೆಂಬ ಅಂಶ ತಿಳಿದು ಬರುವುದು. ಇದು ಇನ್ನೂ ಭಯಾನಕವಾದುದು. ಈ ಕಾಲದಲ್ಲಿ ಮನುಷ್ಯ ಪ್ರಾಣವು ಕಸಕ್ಕಿಂತ ಕಡೆಯಾಗಿತ್ತು. ಮನುಷ್ಯ ಜೀವಿಗಳನ್ನು ಸುಡುವ ಹೂಳುವ ಹಾಗೂ ಕಡಿಯುವ ರಾಕ್ಷಸ ಕಾರ್ಯ ಸರಾಗವಾಗಿ ನಡೆಯುತ್ತಿತ್ತು. ಇಂದು ಜೀವವೊಂದುಳಿದರೆ ಸಾಕು ಏನು ಬೇಕಾದರೂ ಸಾಧಿಸಬಹುದು ಎಂದು ಭಾವಿಸುತ್ತೇವೆ. ಆದರೆ ವೀರಯುಗ ಎನಿಸಿಕೊಂಡಿರುವ ವಿಜಯನಗರ ಸಾಮ್ರಾಜ್ಯದಲ್ಲಿ ಸ್ವಾಮಿಭಕ್ತಿಗಾಗಿ ಪ್ರಾಣವನ್ನೇ ಪಣವಾಗಿ ಒಡ್ಡುವ ಸೈನಿಕರು ರಾಜ್ಯದಲ್ಲಿ ಇದ್ದರು. ಪ್ರಾಣಾರ್ಪಣೆಯೇ ಅವರ ಆದರ್ಶವಾಗಿತ್ತು. ರಾಜ್ಯದಲ್ಲಿ ಬ್ರಾಹ್ಮಣರಿಗೆ ಶ್ರೇಷ್ಠ ಸ್ಥಾನವಿತ್ತು ಎಂದು

ಮೊದಲೇ ಹೇಳಲಾಗಿದೆ. 'ಪಯಾಸ್' ಹೇಳುವಂತೆ "ಈ ಬ್ರಾಹ್ಮಣರು ನಮ್ಮ ಕ್ರೈಸ್ತ ಸನ್ಯಾಸಿಗಳಂತಿರುವರು ಮತ್ತು ಇವರನ್ನು ಪವಿತ್ರ ಮಾನವರೆಂದು ಪರಿಗಣಿಸಲ್ಪಡುತ್ತಾರೆ. ನಾನು ಹೇಳುತ್ತಿರುವುದು. ಪುರೋಹಿತರು ಮತ್ತು ಪಂಡಿತರಾದ ಬ್ರಾಹ್ಮಣರ ಬಗೆಗೆ. ಏಕೆಂದರೆ ರಾಜನಲ್ಲಿ ಅನೇಕ ಬ್ರಾಹ್ಮಣರಿದ್ದರಾದರೂ ಅವರು ಪಟ್ಟಣ ಹಾಗೂ ನಗರಗಳ ಅಧಿಕಾರಿಗಳಾಗಿದ್ದು, ಅವುಗಳ ಆಡಳಿತಕ್ಕೆ ಸೇರಿದವರು. ಮಿಕ್ಕವರು ವರ್ತಕರು ಮತ್ತು ಇನ್ನುಳಿದವರು ತಮ್ಮದೆ ಆಸ್ತಿ ಮತ್ತು ಸಾಗುವಳಿಯಿಂದ ಮತ್ತು ತಮ್ಮ ಪಿತ್ರಾರ್ಜಿತ ಹೊಲಗಳಲ್ಲಿ ಬೆಳೆಯುವ ಪೈರನ್ನು ಅವಲಂಬಿಸಿ ಜೀವನ ನಿರ್ವಹಿಸುತ್ತಾರೆ. ದೇವಾಲಯಗಳ ಹೊಣೆಯುಳ್ಳವರು ಪಂಡಿತರಾಗಿದ್ದು ಸಾವಿಗೆ ಈಡಾಗುವ ಮಾಂಸ, ಮೀನು ಅಥವಾ ಸಾರನ್ನು ಕೆಂಪಾಗಿಸುವ ಯಾವುದನ್ನು ತಿನ್ನುವುದಿಲ್ಲ. ಏಕೆಂದರೆ ಅದು ರಕ್ತವಾಗಿರುತ್ತದೆಂದು ಅವರು ಹೇಳುತ್ತಾರೆ."[೫]

ವಿಜಯನಗರ ಸಾಮ್ರಾಜ್ಯದಲ್ಲಿ ಬ್ರಾಹ್ಮಣರ ಸ್ಥಾನ ಅತ್ಯಂತ ಶ್ರೇಷ್ಠವಾಗಿತ್ತು. ರಾಜನ ನಂತರದ ಸ್ಥಾನ ಬ್ರಾಹ್ಮಣರಿಗೆ ಇತ್ತು. ಇಂದಿನ ಕೆಲವು ಬ್ರಾಹ್ಮಣರಿಗೆ ಹೋಲಿಸಿದಾಗ ಯಾವುದೇ ದುರ್ವ್ಯಸನವಿಲ್ಲದ ಪುರೋಹಿತ ವರ್ಗ ಸಾಮ್ರಾಜ್ಯದಲ್ಲಿತ್ತು. ರಾಜನು ರಾಜ್ಯದ ಎಲ್ಲ ಪ್ರಗತಿಯ ಕಾರ್ಯವನ್ನು ಪುರೋಹಿತ ವರ್ಗಕ್ಕೆ ಕೇಳಿಯೇ ಮುಂದುವರಿಸುತ್ತಿದ್ದ ಎಂಬ ಅಂಶ ಮುಖ್ಯವಾದುದು. ಪಂಡಿತರಿಗೆ ರಾಜ್ಯದಲ್ಲಿ ಬಹಳ ಗೌರವವಿತ್ತು. ವೇದ ವೇದಾಂಗಗಳನ್ನು ಬಲ್ಲ ಬ್ರಾಹ್ಮಣರು ಅಥವಾ ಪುರೋಹಿತ ವರ್ಗಕ್ಕೂ ಶ್ರೇಷ್ಠ ಸ್ಥಾನವನ್ನು ಕೊಡಲಾಗಿತ್ತು.

ಕೃಷ್ಣದೇವರಾಯನ ಕಾಲವು ಕನ್ನಡಿಗರ ಅತ್ಯಂತ ಗೌರವದ ಕಾಲವೆಂದು ಹೇಳಬಹುದು. ಕನ್ನಡಿಗರ ಪರಾಕ್ರಮದ ಅಬ್ಬರದಲ್ಲಿ ವಿಜಯನಗರದ ಸಾಮ್ರಾಜ್ಯದ ಸುತ್ತಮುತ್ತಲಿನ ಮುಸ್ಲಿಂ ಅರಸರು ತತ್ತರಿಸುತ್ತಲಿದ್ದರು. ಕೃಷ್ಣದೇವರಾಯನು ಜೀವಂತವಿರುವವರೆಗೆ ಬಿಜಾಪುರದ ಆದಿಲ್‌ಶಾಹನಿಗೆ ವಿಜಯನಗರದ ಮೇಲೆ ದಂಡೆತ್ತಿ ಬರಲು ಸಾಧ್ಯವಾಗಲಿಲ್ಲ. ಆದರೆ ಕೃಷ್ಣದೇವರಾಯನ ಸೈನ್ಯದಲ್ಲಿ ಸಾಕಷ್ಟು ಮುಸ್ಲಿಂ ಸೈನಿಕರು ಇದ್ದರು. ಅವರಿಗೆ ಯಾವುದೇ ಮತಬೇಧವಿಲ್ಲದೆ ಅರಸನು ಧರ್ಮ ಸಮನ್ವಯವನ್ನು ಮೆರೆದು ಆದರ್ಶ ರಾಜ ಎನಿಸಿಕೊಂಡಿದ್ದನು. ಕೃಷ್ಣದೇವರಾಯನ ನಂತರ ಆಳಿದ ಅಳಿಯ ರಾಮರಾಯನು. ಅತ್ಯಂತ ಮಹತ್ವಾಕಾಂಕ್ಷಿ ರಾಜನಾಗಿದ್ದು, ರಾಜ್ಯವನ್ನು ಚೆನ್ನಾಗಿ ಸಂರಕ್ಷಿಸಿದ್ದನು.

"ಮಹಾ ಪ್ರತಾಪಿಯಾದ ರಾಮರಾಯನು ಆದರ್ಶ ವೀರನಾಗಿದ್ದು ಒಂದು ದಿನ ಹುಲಿ ಬೇಟೆಗೆಂದು ಅರಣ್ಯಕ್ಕೆ ತೆರಳಿ ಅರಣ್ಯದಲ್ಲಿ ತನ್ನವರನ್ನು ಅಗಲಿದ ಹದಿನಾರು ವಯಸ್ಸಿನ ಮುಸ್ಲಿಂ ಯುವತಿಯೊಬ್ಬಳನ್ನು ಕಂಡು ಮನಸೋತು ಅವಳನ್ನು ತಂದು ತನ್ನ ನಿವಾಸ (ಕುಂಜವನ)ದಲ್ಲಿ ಇರಿಸಿಕೊಂಡು ಅವಳನ್ನು ವಿವಾಹವಾದ ಪ್ರಸಂಗವೊಂದು ನಡೆದಿದೆ. ಆದರ್ಶ ವೀರನಾದ ರಾಮರಾಯನು ತಾನು ಕಂಡು ಇಷ್ಟಪಟ್ಟ ಮೆಹರ್ಬಾನ ಎಂಬ ಮುಸ್ಲಿಂ ಯುವತಿಯನ್ನು ತನ್ನ ಪ್ರಾಣದಂತೆ ಪ್ರೀತಿಸುತ್ತಿದ್ದನು ಹಾಗೂ ಅವಳಿಗೆ

ಎಲ್ಲ ಅನುಕೂಲಗಳನ್ನು ಕಲ್ಪಿಸಿದ್ದು, ಏನೂ ತೊಂದರೆಯಾಗದಂತೆ ಕುಂಜವನಕ್ಕೆ ಬಂದು ಅವಳ ಕ್ಷೇಮವನ್ನು ವಿಚಾರಿಸುತ್ತಿದ್ದನು. ಆದರೆ, ಕೃಷ್ಣದೇವರಾಯನು ರಾಮರಾಯನನ್ನು ಅಳಿಯನನ್ನಾಗಿ ಸ್ವೀಕರಿಸುವರು ಎಂಬ ವಿಷಯವನ್ನು ಕೇಳಿ, ರಾಮರಾಯನ ಪ್ರೀತಿಯನ್ನು ಅರಿಯದೆ ಹಿಂದೂವಾದ ಕಾಫರ ರಾಮರಾಯನನ್ನು ನಂಬಿ ಕೆಟ್ಟನೆಂದು ತಿಳಿದ ಮೆಹರ್ಜಾನಳು ತನ್ನ ಸೇವಕಿಯಾದ ಮಾರ್ಜಿನೆಯನ್ನು ಕರೆದುಕೊಂಡು ಸಂಗನಕಲ್ಲಿನ ಫೀರನ ದರ್ಗಾಕ್ಕೆ ಹೋಗುವ ನೆಪದಿಂದ ಕುಂಜವನದಿಂದ ಹೊರಟು ತಮ್ಮ ಜೊತೆಗೆ ಬಂದ ರಾಮರಾಯನ ಸೇವಕ ಧನಮಲ್ಲನಿಗೆ ವಂಚಿಸಿ ಅಲ್ಲಿಂದ ಪಾರಾಗಿ ಹೋದ ಅನಿಬ್ಬರು ವಿಜಾಪುರದ ಸುಲ್ತಾನರನ್ನು ಸೇರಿಕೊಂಡ ಸಂದರ್ಭವೊಂದು ಕನ್ನಡಿಗರ ಕರ್ಮಕತೆ ಕಾದಂಬರಿಯಿಂದ ತಿಳಿದು ಬರುವುದು. ನಂತರ ಬಹಳ ದಿನಗಳವರೆಗೆ ಅಂದರೆ ಮೂವತ್ತು ವರ್ಷಗಳವರೆಗೆ ಮೆಹರ್‌ಜಾನ್‌ಳ ಪತ್ತೆಯೇ ರಾಮರಾಯನಿಗೆ ಸಿಗುವುದಿಲ್ಲ. ರಾಮರಾಯನು ಅವಳನ್ನು ಎಲ್ಲೆಲ್ಲಿಯೋ ಹುಡುಕಿಸುತ್ತಾನೆ. ಕೊನೆಗೆ ಇವಳ ಗರ್ಭದಿಂದ ಜನಿಸಿದ ರಣಮಸ್ತ ಖಾನನಿಂದಲೇ ರಾಮರಾಯನ ಪ್ರಾಣಹರಣವಾಗುತ್ತದೆ."[೬]

ರಾಮರಾಯನು ಮಹಾ ಪ್ರತಾಪಿಯಾಗಿದ್ದು ವಯಸ್ಸಾಗಿದ್ದರೂ ತರುಣನಾದ ರಣಮಸ್ತ ಖಾನ ಮತ್ತು ಅವರ ಸೈನಿಕರೊಂದಿಗೆ ವೀರಾವೇಶದಿಂದಲೇ ಹೋರಾಡುತ್ತಿದ್ದನು. ಗೆಲುವು ಇವನದೇ ಆಗುತ್ತಿತ್ತು. ಆದರೆ ರಾಮರಾಯನ ರಥದ ಕುದುರೆಯ ಒಂದು ಕಾಲು ಕಡಿದು ಬಿದ್ದು ರಥವು ನಿಂತು ಹೋಯಿತು. ರಾಮರಾಜನ ಸೈನಿಕರು ರಣಮಸ್ತಖಾನನ ಸೈನಿಕರೊಂದಿಗೆ ಹೋರಾಡುತ್ತಿದ್ದರು. ರಾಮರಾಜನು ಹೆದರದೆ ಕಾದುತ್ತಿರುವಾಗ ಆತನ ಒಂದು ಕೈಯು ಕತ್ತರಿಸಿ ಬಿದ್ದಿತು. ಒಡಯನಿಗೆ ಆದ ದುರಸ್ಥೆಯನ್ನು ಕಂಡು ಸೈನಿಕರು ಹತಾಶರಾಗಿ ದಿಕ್ಕು ಪಾಲಾಗಿ ಓಡಿದರು. ರಣಮಸ್ತಖಾನನು ಒಮ್ಮೆಲೆ ರಾಮರಾಜನ ತಲೆಯ ಮುಂಡಾಸವನ್ನು ಹಾರಿಸಿ ಆತನ ರುಂಡವನ್ನು ಹಾರಿಸಿದನು. ಹಿಂದೂ ದಂಡಾಳುಗಳೆಲ್ಲ ರಾಮರಾಜನ ಶಿರಚ್ಛೇದವಾದುದನ್ನು ಕೇಳಿ ದಿಕ್ಕು ದಿಕ್ಕಿಗೆ ಓಡಹತ್ತಿದರು. ರಾಮರಾಜನ ಭೀಕರ ಕೊಲೆಯಿಂದ ತತ್ತರಿಸಿದ ರಾಜ್ಯದ ಜನತೆಯಲ್ಲಿ ಹಾಹಾಕಾರವು ಉಂಟಾಯಿತು. ಅರಮನೆಯಲ್ಲಿದ್ದ ರಾಜನ ವಂಶದವರು ತಮ್ಮ ಕೈಗೆ ಸಿಕ್ಕ ಸಂಪತ್ತನ್ನು ತೆಗೆದುಕೊಂಡು ರಾಜಧಾನಿಯನ್ನು ಬಿಡತೊಡಗಿದರು. ಇದರಿಂದ ನಾಗರಿಕರು ಹೌಹಾರಿದರು. ರಣಾಂಗಣದಿಂದ ಪಾರಾಗಿ ಬಂದ ತಿರುಮಲರಾಯನು ಅರಮನೆಗೆ ಬಂದ ಕೂಡಲೆ, ಮೊದಲು ಸೆರೆಮನೆಯಲ್ಲಿಟ್ಟಿದ್ದ ಸದಾಶಿವರಾಯನನ್ನು ಕರೆದುಕೊಂಡು ಅಗಣಿತ ಸಂಪತ್ತಿನೊಡನೆ ರಾಜಧಾನಿಯಿಂದ ಹೊರಟು ಹೋದನು. ಪ್ರತ್ಯಕ್ಷ ಸೇನಾಪತಿಯೇ ಓಡಿ ಹೋದ ಬಳಿಕ ಉಳಿದವರು ಏನೂ ಮಾಡಬೇಕು? ಯಾವನ ಕೈಗೆ ಏನು ಸಿಕ್ಕಿತೋ ಅದನ್ನು ತಝ್ಕೊಂಡು ಜನರು ರಾಜಧಾನಿಗೆ ಶರಣು ಹೊಡೆದು ನಡೆದರು. ಈ ಅರಾಜಕ ಸ್ಥಿತಿಯಲ್ಲಿ ಲಮ್ಮಾಣಿಗಳು, ಕೊರಚರು ಮುಂತಾದ ಕಾಡುಜನರು ಹಾಡುಹಗಲೆ ವಿಜಯನಗರ ಸಾಮ್ರಾಜ್ಯವನ್ನು ಸೂರೆಗೊಂಡರು. ಸತತವಾಗಿ ನಡೆದ ಸುಲಿಗೆಯ ಕಾರ್ಯದಿಂದ ವಿಜಯನಗರವು ಸಮೂಲವಾಗಿ ನಾಶವಾಯಿತು.

ಪೋರ್ಚುಗೀಸ್ ಪ್ರವಾಸಿಯಾದ ನ್ಯೂನಿಜ್ ಅಭಿಪ್ರಾಯ ಪಡುವಂತೆ ವಿಜಯನಗರ ಸಾಮ್ರಾಜ್ಯದಲ್ಲಿ ಸೈನ್ಯಬಲವು ಎಷ್ಟಿತ್ತೆಂದರೆ "ಕೃಷ್ಣದೇವರಾಯನು ರಾಯಚೂರನ್ನು ಮುತ್ತಿಗೆ ಹಾಕಲು ಹಾಗೂ ಅದರೊಂದಿಗೆ ಯುದ್ಧವನ್ನು ಮಾಡಲು ೭,೦೩,೦೦೦ ಕಾಲ್ದಳ, ೩೨,೬೦೦ ಕುದುರೆಗಳು ಹಾಗೂ ೫೫೧ ಆನೆಗಳೊಂದಿಗೆ ಹೊರಟ್ಟಿದ್ದನು. ಕೃಷ್ಣದೇವರಾಯನ ದರ್ಬಾರಿನಲ್ಲಿ ಉಪಸ್ಥಿತನಿದ್ದ ಪೋರ್ಚುಗೀಸ್‌ನ ಮತ್ತೊಬ್ಬ ಪ್ರವಾಸಿ ಪಯಾಸ್ ಗಮನಾರ್ಹವಾಗಿ ಕಂಡದ್ದೇನೆಂದರೆ ಅರಸನು ಒಂದು ದಶಲಕ್ಷ ಸೈನಿಕರಿಂದ ಕೂಡಿದ ಪಡೆಯನ್ನು ಹೊಂದಿದ್ದನು. ಅದರಲ್ಲಿ ಶಸ್ತ್ರಸಜ್ಜಿತವಾದ ೩೫೦೦೦ ಸಂಖ್ಯೆಯ ಅಶ್ವದಳವಿತ್ತು. ಇವರೆಲ್ಲರೂ ರಾಯರಲ್ಲಿ ಸಂಬಳಕ್ಕೆ ದುಡಿಯುತ್ತಿದ್ದು ಅವರ ಸೇವೆಗೆ ಸದಾ ಸಿದ್ಧವಿದ್ದರು. ಆತ ಅಗತ್ಯಬಿದ್ದಾಗ ಯಾವುದೇ ಮೂಲೆಗೆ ತನ್ನ ತುಕುಡಿ (ಸೈನ್ಯ)ವನ್ನು ಕಳುಹಿಸಲು ಸಿದ್ಧವಾಗಿರುವಂತೆ ಸೈನ್ಯಕ್ಕೆ ಆದೇಶಿಸಿದ್ದ. ಈ ಬಿಸಂಗ (ವಿಜಯನಗರ)ದಲ್ಲಿ ನಾನು ಕಂಡಿದ್ದೇನೆಂದರೆ ರಾಜನು ಕಡಲ ತೀರದ ಒಂದು ಪ್ರದೇಶದ ವಿರುದ್ಧ ಯುದ್ಧ ಮಾಡಲು ತನ್ನ ಸೈನ್ಯವನ್ನು ಕಳುಹಿಸಿದ್ದನು ಹಾಗೂ ೫೦ ಮಂದಿ ಸೇನಾ ನಾಯಕರೊಂದಿಗೆ ೧೫೦,೦೦೦ ಸೈನಿಕರನ್ನು ಕಳುಹಿಸಿದ್ದನೆನ್ನಲಾಗಿದೆ. ಅದರಲ್ಲಿ ಹಲವಾರು ಅಶ್ವದಳವನ್ನು ಹೊಂದಿದ್ದರು. ರಾಜನು ವೈರಿಗಳಿಗೆ ತನ್ನ ಶಕ್ತಿಯನ್ನು ಪ್ರದರ್ಶಿಸಲು ಇಚ್ಛಿಸಿದಾಗ ಅವರು ಹೇಳುವಂತೆ ಆತ ಯುದ್ಧ ಭೂಮಿಯಲ್ಲಿ ೨ ದಶಲಕ್ಷ ಸೈನಿಕರನ್ನು ಕಳಿಸುತ್ತಿದ್ದನೆನ್ನಲಾಗಿದೆ. ಆ ಭಾಗದಲ್ಲಿ ಆತ ವೈರಿಗಳಿಗೆ ಭಯವನ್ನು ಹುಟ್ಟಿಸುವ ರಾಜನಾಗಿ ಪರಿಣಮಿಸಿದ್ದ. ತನ್ನ ಸಾಮ್ರಾಜ್ಯದಿಂದ ಅನೇಕ ಮಂದಿ ಪುರುಷರನ್ನು ಯುದ್ಧ ಭೂಮಿಗೆ ತನ್ನೊಂದಿಗೆ ಆತ ಕರೆದುಕೊಂಡು ಹೋಗಿದ್ದರಿಂದ ಆ ಸಾಮ್ರಾಜ್ಯದಲ್ಲಿ ಪುರುಷರಾರು ಇರಲಿಲ್ಲ ಎಂದು ತಿಳಿಯಬೇಕಾಗಿಲ್ಲ. ಅವನ ರಾಜ್ಯದಲ್ಲಿ ಜನಸಂಖ್ಯೆ ಎಷ್ಟಿತ್ತೆಂದರೆ ಆತನು ಒಬ್ಬ ಪುರುಷನನ್ನು ಸಹ ನಗರದಿಂದ ಯುದ್ಧಭೂಮಿಗೆ ಕರೆದುಕೊಂಡು ಹೋಗಿಲ್ಲವೇನೋ ಎನ್ನುವಷ್ಟರಮಟ್ಟಿಗೆ ಪೂರ್ಣವಾಗಿ ತುಂಬಿತ್ತು."[೬]

ವಿಜಯನಗರದ ಅರಸರು ಬಲಾಢ್ಯವಾದ ಸೇನಾದಳವನ್ನು ಹೊಂದಿದ್ದು ಅವರ ಸಾಮ್ರಾಜ್ಯದಿಂದ ತಕ್ಷಣವೇ ಎಷ್ಟು ಸೈನ್ಯ ಬೇಕಾದರೂ ಕಳಿಸುವ ಸಾಮರ್ಥ್ಯವನ್ನು ಹೊಂದಿದ್ದರು. ರಾಜ್ಯದಲ್ಲಿ ಸೈನಿಕ ಜನಸಂಖ್ಯೆ ಪ್ರಬಲವಾಗಿತ್ತು. (ವೃದ್ಧರು ಮತ್ತು ಬಾಲಕರನ್ನು ಉಳಿದು) ಪ್ರತಿನಿತ್ಯ ಸೈನಿಕರಿಗೆ ತರಬೇತಿ ನೀಡಲಾಗುತ್ತಿತ್ತು.

"ಧರ್ಮವನ್ನು ರಕ್ಷಿಸಬೇಕೆಂಬ ಸಂಗಮ ಸಹೋದರರ ಸಂಕಲ್ಪಕ್ಕೆ ಕರ್ನಾಟಕ ಆಂಧ್ರಪ್ರದೇಶ ಮತ್ತು ತಮಿಳುನಾಡಿನ ಮೂಲೆ ಮೂಲೆಯಿಂದಲೂ ಪ್ರೋತ್ಸಾಹವು ಸಿಕ್ಕಿದ್ದರಿಂದ ವಿಜಯನಗರದ ಅರಸರು ತಮ್ಮ ರಾಜನೀತಿಯಲ್ಲಿ ಸರ್ವಮತಸಹಿಷ್ಣುತೆಯನ್ನು ಮೂಲಭೂತ ಧ್ಯೇಯವನ್ನಾಗಿ ಆಚರಿಸಿಕೊಂಡು ಬಂದರು. ಮುಸ್ಲಿಮರ ವಿಷಯದಲ್ಲೂ ಇದೇ ಧೋರಣೆಯನ್ನು ಅನುಸರಿಸಿಕೊಂಡು ಬಂದರು. ಹಂಪಿಯ

ಅವಶೇಷಗಳಲ್ಲಿ ಕಂಡು ಬರುವ ಅನೇಕ ಜೈನ, ಶೈವ, ವೈಷ್ಣವ ಮತ್ತು ಶಾಕ್ತ ದೇವಾಲಯಗಳು ರಾಜಧಾನಿಯ ಎಲ್ಲೆಯೊಳಗೂ ಹೊರಗಿನ 'ಕದಿರಾಮಪುರ'ದಲ್ಲಿಯೂ ಕಾಣಬರುವ ಮಸೀದಿಗಳು ಹಾಗೂ ಮುಸ್ಲಿಮರ ಗೋರಿಗಳು ಮತ್ತು ಇತರ ಕಟ್ಟಡಗಳು ಮುಸ್ಲಿಂ ಮಾದರಿಯ ಸ್ಮಾರಕಗಳಾಗಿವೆ. ಇಮ್ಮಡಿ ದೇವರಾಯನ ಸೈನ್ಯದಲ್ಲಿ ಮುಸ್ಲಿಂ ಧನುರ್ಧಾರಿ ಸೈನಿಕರ ಸಂಖ್ಯೆ ಬಹಳವಿತ್ತು. ಈ ಸೈನಿಕರು ರಾಜನ ಸಭಾಂಗಣಕ್ಕೆ ಬಂದು ವಂದಿಸುವಾಗ ಅವರ ಮನಸ್ಸಿಗೆ ಯಾವ ಸಂಕೋಚವೂ ಆಗದಿರಲೆಂದೂ ತಮ್ಮ ಧರ್ಮಗ್ರಂಥಕ್ಕೆ ತಲೆಬಾಗಿದ ಹಾಗೆ ತೋರಬೇಕೆಂದು ತನ್ನ ಸಿಂಹಾಸನದ ಪಕ್ಕದ ಒಂದು ಪೀಠದ ಮೇಲೆ ಕುರಾನಿನ ಪ್ರತಿಯನ್ನು ಇರಿಸಿದ್ದರು. ಅರಸನಿಗೆ ಇದ್ದ ಆಗ್ರಹ ಸುಲ್ತಾನನ ಮತ್ತು ಅವನ ಮಾಂಡಳಿಕರ ಧರ್ಮರಹಿತ ನೀತಿಗೆ ವಿರುದ್ಧವಾಗಿತ್ತೇ ವಿನಃ ಇಸ್ಲಾಂ ಧರ್ಮದ ಮೇಲೆ ಇರಲಿಲ್ಲ. ವಿಜಯನಗರದ ಸಾಂಸ್ಕೃತಿಕ ವಾತಾವರಣದಲ್ಲಿ ಕಂಡು ಬರುವ ಸೌಜನ್ಯತೆ, ಸಹನೆ, ಅಲ್ಲಿಯ ಜನಜೀವನದಲ್ಲಿ ಸರ್ವ ಸಾಮಾನ್ಯವಾಗಿತ್ತೆಂಬುದನ್ನು ಗಮನಿಸಬೇಕು. ಅರಸರ ವೈಯಕ್ತಿಕ ಭಾವನೆಗಳೇನೇ ಇರಲಿ ಮತಾಂಧತೆಗೆ ಅವರು ಜಾಗ ಕೊಡಲಿಲ್ಲ."೮

ರಾಜ್ಯದ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರವು ಉತ್ತಮವಾಗಿದ್ದರೂ ಸಮಾಜದಲ್ಲಿ ಕೆಲವೊಂದು ಅನಿಷ್ಟ ಪದ್ಧತಿಗಳು ಕೊನೆಗೊಳ್ಳಲಾರವೇನೋ ಎನ್ನುವ ಹಾಗೆ ತಾಂಡವವಾಡುತ್ತಿದ್ದವು. ಅವುಗಳ ಆಚರಣೆ ಸಂಪ್ರದಾಯವಾಗಿ ಉಳಿದುಕೊಂಡು ಸಮಾಜವನ್ನು ನುಂಗುತ್ತಿರುವ ಮಾರಿಯ ರೂಪವನ್ನು ಧರಿಸಿತ್ತು. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಸತಿಪದ್ಧತಿ ಮತ್ತು ದೇವದಾಸಿ ಪದ್ಧತಿ (ಈ ದೇವದಾಸಿ ಪದ್ಧತಿ ಇಂದಿಗೂ ಇದೆ).

ಗಂಡನು ಸತ್ತಾಗ ಅವನ ಹೆಂಡತಿಯರು ಅಗ್ನಿ ಪ್ರವೇಶಿಸಿ ಸಹಗಮನ ಮಾಡುವ ಪದ್ಧತಿ ಇತ್ತು. ಸಹಗಮನ ಮಾಡುವುದು ತಮಗೆ ಗೌರವವೆಂದು ಅವರು ಭಾವಿಸಿದ್ದರು. ಇದರಿಂದಾಗಿ "ತಮ್ಮ ಗಂಡಂದಿರು ಸತ್ತಾಗ ಅವರು ತಮ್ಮ ಗಂಡಂದಿರ ಸಂಬಂಧಿಗಳೊಡನೆ ಶೋಕಿಸುತ್ತಾರೆ. ಆದರೆ ಅಳತೆ ಮೀರಿ ಶೋಕಿಸುವ ಹೆಂಡತಿಗೆ ತನ್ನ ಗಂಡನನ್ನು ಅರಸಿ ಹೋಗುವ ಇಚ್ಛೆಯಿಲ್ಲವೆಂದು ಅವರು ಭಾವಿಸುತ್ತಾರೆ ಮತ್ತು ಶೋಕ ಮುಗಿದ ಮೇಲೆ ಅಗ್ನಿ ಪ್ರವೇಶಿಸಲು ಮತ್ತು ತಮ್ಮ ಸಂತತಿಗೆ ಅವಮರ್ಯಾದೆ ಮಾಡದಿರಲು ಅವರ ಸಂಬಂಧಿಗಳು ಅವರಿಗೆ ಉಪದೇಶಿಸುತ್ತಾರೆ. ಅದಾದ ನಂತರ ಅವರು ಸತ್ತವನನ್ನು ಟೊಂಗೆಗಳ ಮತ್ತು ಹೂಗಳಿಂದ ಅಚ್ಛಾದಿತವಾದ ಮಂಟಪವುಳ್ಳ ಹಾಸಿಗೆಯ ಮೇಲೆ ಇಡುತ್ತಾರೆ ಹಾಗೂ ಹೆಂಡತಿಯನ್ನು ಒಂದು ಕೆಲಸಕ್ಕೆ ಬಾರದ ಕುದುರೆ ಹತ್ತಿಸುತ್ತಾರೆ, ಅವಳು ಅನೇಕ ಆಭರಣ ತೊಟ್ಟು ಗುಲಾಬಿಗಳಿಂದ ಅಚ್ಛಾದಿತವಾಗಿ ಅವರ ಹಿಂದೆ ಹೋಗುತ್ತಾಳೆ. ಅವಳು ಒಂದು 'ಕೈಯಲ್ಲಿ ಕನ್ನಡಿಯನ್ನು, ಇನ್ನೊಂದರಲ್ಲಿ ಹೂಗೊಂಚಲನ್ನು ಹಿಡಿದಿರುತ್ತಾಳೆ ಮತ್ತು ಅನೇಕ ವಿಧದ ಸಂಗೀತದಿಂದೊಡಗೂಡಿ (ಅವಳು ಹೋಗುತ್ತಾಳೆ)

ಮತ್ತು ಅವನ ಸಂಬಂಧಿಗಳು ಅತಿ ಸಂತೋಷದಿಂದ ಅವಳೊಂದಿಗೆ ಹೋಗುತ್ತಾರೆ. ಒಬ್ಬ ಮನುಷ್ಯನೂ ಚಿಕ್ಕ ನಗಾರಿ ಬಾರಿಸುತ್ತ ನಡೆಯುತ್ತಾನೆ ಮತ್ತು ಅವಳು ತನ್ನ ಗಂಡನನ್ನು ಸೇರಲು ಹೊರಟಿರುವಳೆಂದು ಸಾರುವ ಹಾಡನ್ನು ಹಾಡುತ್ತಾನೆ. ಹಾಗೂ ಅವಳು ಹಾಗೆ ಮಾಡುವುದಾಗಿ ಹಾಡುತ್ತಲೇ ಹೇಳುತ್ತಾಳೆ. ಅವರನ್ನು ಯಾವಾಗಲೂ ಸುಡುವ ಸ್ಥಳಕ್ಕೆ ಅವಳು ಬರುತ್ತಲೇ ತನ್ನ ಗಂಡನನ್ನು ಸುಡುವವರೆಗೆ ಸಂಗೀತಗಾರರೊಂದಿಗೆ ಅವಳು ಕಾಯುತ್ತಾಳೆ. ಅವನ ದೇಹವನ್ನು ಅದಕ್ಕಾಗಿಯೇ ಮಾಡಿದ ಬಹಳ ಕಟ್ಟಿಗೆಯಿಂದ ಮುಚ್ಚಲಾದ ದೊಡ್ಡ ಕುಣಿಯಲ್ಲಿ ಇಡುತ್ತಾರೆ. ಉರಿ ಹಚ್ಚುವ ಮುನ್ನ ಅವನ ತಾಯಿ ಅಥವಾ ತೀರ ಹತ್ತಿರದ ಸಂಬಂಧಿ ತಲೆಯ ಮೇಲೆ ನೀರಿನ ಕುಡಿಕೆಯನ್ನು ಹೊತ್ತು ಮತ್ತು ಕೈಯಲ್ಲಿ ಕೊಳ್ಳಿ ಹಿಡಿದು (ಈಗಲೂ ಈ ರೀತಿ ಕೊಳ್ಳಿ ಹಿಡಿಯುತ್ತಾರೆ.) ಕುಣಿಯ ಸುತ್ತ ಮೂರು ಸಲ ಹೋಗುತ್ತಾಳೆ ಮತ್ತು ಸುತ್ತಿಗೊಂದರಂತೆ ಪಾತ್ರೆಯಲ್ಲಿ ತೂತುಗಳನ್ನು ಮಾಡುತ್ತಾಳೆ ಹಾಗೂ ಈ ಮೂರು ಸುತ್ತು ಮುಗಿದ ಮೇಲೆ ಸುಣ್ಣದಿದ್ದ ಮಣ್ಣಿನ ಕುಡಿಕೆಯನ್ನು ಒಡೆಯುತ್ತಾಳೆ, ಕೊಳ್ಳಿಯನ್ನು ಕುಣಿಯಲ್ಲಿ ಎಸೆಯುತ್ತಾಳೆ. ಆಮೇಲೆ ಅವರು ಉರಿ ಹಚ್ಚುತ್ತಾರೆ. ಮತ್ತು ದೇಹ ಸುಟ್ಟಾಗ ಉತ್ಸವಕ್ಕೆ ಬಂದ ಎಲ್ಲರೊಡನೆ ಹೆಂಡತಿ ಬಂದು ಕಾಲು ತೊಳೆದುಕೊಳ್ಳುತ್ತಾರೆ. ಮತ್ತು ಆ ಮೇಲೆ ಒಬ್ಬ ಬ್ರಾಹ್ಮಣ ಅವರ ಧರ್ಮದಂತೆ ಅವಳ ಮೇಲೆ ಕೆಲವು ಕರ್ಮಗಳನ್ನು ಮಾಡುತ್ತಾನೆ ಮತ್ತು ಅವನು ಇದನ್ನು ಮಾಡಿ ಮುಗಿಸಿದ ಮೇಲೆ ಅವಳು ತಾನು ತೊಟ್ಟಿದ್ದ ಎಲ್ಲ ಆಭರಣಗಳನ್ನು ತನ್ನ ಕೈಯಿಂದಲೇ ತೆಗೆಯುತ್ತಾಳೆ. ಮತ್ತು ತನ್ನ ಸ್ತ್ರೀ ಸಂಬಂಧಿಗಳಲ್ಲಿ ಹಂಚುತ್ತಾಳೆ. ಮತ್ತು ಅವಳಿಗೆ ಮಕ್ಕಳಿದ್ದರೆ ಅವರನ್ನು ತನ್ನ ಅತ್ಯಂತ ಗೌರವಾನ್ವಿತ ಸಂಬಂಧಿಗಳಿಗೆ ಒಪ್ಪಿಸುತ್ತಾಳೆ. ಅವಳು ತೊಟ್ಟಿದ್ದ ಎಲ್ಲವನ್ನು ಅವಳ ಒಳ್ಳೆಯ ಬಟ್ಟೆಗಳನ್ನೂ ಸಹ, ಅವರು ಕಳಚಿದ ಮೇಲೆ ಅವರು ಅವಳಿಗೆ ಒಂದಿಷ್ಟು ಸಾದಾ ಹಳದಿ ಬಟ್ಟೆಗಳನ್ನು ತೊಡಿಸುತ್ತಾರೆ. ಮತ್ತು ಅವಳ ಸಂಬಂಧಿಗಳು ಅವಳ ಕೈಹಿಡಿದುಕೊಳ್ಳುತ್ತಾರೆ. ಮತ್ತು ಅವಳು ಇನ್ನೊಂದರಲ್ಲಿ ಒಂದು ಟೊಂಗೆ ಹಿಡಿದುಕೊಂಡು ಉರಿಯಿದ್ದ ಕುಣಿಯಿದ್ದಲ್ಲಿಗೆ ಹಾಡುತ್ತ ಓಡುತ್ತ ಹೋಗುತ್ತಾಳೆ.

ಅಲ್ಲದೆ ಆ ಕುಣಿಯ ಬಳಿ ಕೆಲವು ಎತ್ತರವಾಗಿ ಮಾಡಲಾದ ಪಾವಟಿಗೆಗಳನ್ನು ಏರುತ್ತಾಳೆ. ಇದನ್ನು ಮಾಡುವ ಮುಂಚೆ ಅವರು ಬೆಂಕಿಯ ಸುತ್ತ ಮೂರು ಸಲ ಸುತ್ತುತ್ತಾರೆ. ಆಗ ಅವಳು ಪಾವಟಿಗೆ ಹತ್ತುತ್ತಾಳೆ. ಮತ್ತು ಬೆಂಕಿ ಕಾಣದಂತೆ ತನ್ನ ಮುಂದೆ ಒಂದು ಚಾಪೆಯನ್ನು ಹಿಡಿಯುತ್ತಾಳೆ. ಅವರು ಅಕ್ಕಿ ಕಟ್ಟಿದ ಅರಿವೆಯನ್ನು ಮತ್ತು ವೀಳ್ಯದೆಲೆ ಇರುವ ಇನ್ನೊಂದನ್ನು ಮತ್ತು ಅವಳು ತನ್ನನ್ನು ಸಿಂಗರಿಸಿಕೊಂಡ ಹಣಿಗೆ ಕನ್ನಡಿಯನ್ನು ತನ್ನ ಗಂಡನ ಬದಿಯಲ್ಲಿ ಸಿಂಗರಿಸಿಕೊಳ್ಳಲು ಇವೆಲ್ಲ ಬೇಕೆನ್ನುತ್ತ ಬೆಂಕಿಯಲ್ಲಿ ಎಸೆಯುತ್ತಾಳೆ. ಅಂತಿಮವಾಗಿ ಅವಳು ಎಲ್ಲರಿಂದ ಬೀಳ್ಕೊಳ್ಳುತ್ತಾಳೆ. ಮತ್ತು ತನ್ನ ತಲೆಯ ಮೇಲೆ ಎಣ್ಣೆಯ ಪಾತ್ರೆ ಇಟ್ಟುಕೊಳ್ಳುತ್ತಾಳೆ ಮತ್ತು ಬೆಂಕಿಯಲ್ಲಿ ಎಷ್ಟೊಂದು ಧೈರ್ಯದಿಂದ ಬೀಳುತ್ತಾಳೆಂದರೆ ಅದೊಂದು ಅದ್ಭುತ ಸಂಗತಿಯಾಗಿದೆ. ಮತ್ತು ಅವಳು ಒಳಗೆ ಬಿದ್ದ ತಕ್ಷಣ ಸಂಬಂಧಿಗಳು ಉರುವಲು

ಕಟ್ಟಿಗೆ ಹಿಡಿದು ಸಿದ್ಧರಾಗಿರುತ್ತಾರೆ ಮತ್ತು ಶೀಘ್ರವಾಗಿ ಅದರಿಂದ ಅವಳನ್ನು ಮುಚ್ಚುತ್ತಾರೆ. ಮತ್ತು ಹೀಗೆ ಮಾಡಿದ ಮೇಲೆ ಅವರೆಲ್ಲ ಗಟ್ಟಿಯಾಗಿ ರೋದನಗೈಯುತ್ತಾರೆ. ಒಬ್ಬ ದಳವಾಯಿ ಸತ್ತಾಗ ಅವನಿಗೆ ಎಷ್ಟೇ ಹೆಂಡಿರಿರಲಿ ಅವರೆಲ್ಲ ಸುಟ್ಟುಕೊಳ್ಳುತ್ತಾರೆ. ಮತ್ತು ರಾಜ ಸತ್ತಾಗಲೂ ಅಷ್ಟೇ ತೆಲುಗರೆಂದು ಕರೆಯಲ್ಪಡುವ ಜಾತಿಯ ಜನರನ್ನು ಬಿಟ್ಟು ವಿಧರ್ಮಿ ನಾಡಿನಲ್ಲೆಲ್ಲ ಇದೇ ಪದ್ಧತಿಯಿದೆ. ತೆಲುಗರಲ್ಲಿ ಅವರು ಸತ್ತಾಗ ಅವರ ಹೆಂಡಿರನ್ನು ಅವರೊಂದಿಗೆ ಸಜೀವವಾಗಿ ದಪನ ಮಾಡಲಾಗುತ್ತದೆ. ಇವರು ಕುಣಿಗೆ ಬಹಳ ಸಂತೋಷದಿಂದ ಹೋಗುತ್ತಾರೆ. ಅದರೊಳಗೆ ಒಂದು ಅವನಿಗೆ ಇನ್ನೊಂದು ಅವಳಿಗೆ ಎರಡು ಮಣ್ಣಿನ ಕುಳ್ಳಿಡೆಗಳನ್ನು ಮಾಡುತ್ತಾರೆ. ಮತ್ತು ಇಬ್ಬರನ್ನು ಅವನವಳ ಕುಳ್ಳಿಡೆಯ ಮೇಲಿರಿಸಿ ಅವರು ಮುಚ್ಚುವವರೆಗೆ ಸ್ವಲ್ಪ ಸ್ವಲ್ಪವಾಗಿ ಮುಚ್ಚುತ್ತಾರೆ. ಹೀಗೆ ಹೆಂಡತಿ ಗಂಡನೊಂದಿಗೆ ಸಾಯುತ್ತಾಳೆ."[೫]

ಸತಿಪದ್ಧತಿಯು ವಿಜಯನಗರ ಕಾಲಕ್ಕೆ ಬಹಳ ವ್ಯಾಪಿಸಿತ್ತು. ಆದರ್ಶ ದಂಪತಿಗಳ ಪ್ರತೀಕವಾಗಿ ಈ ಪದ್ಧತಿಯು ಪ್ರಚಲಿತದಲ್ಲಿತ್ತು. ಆ ಸಂದರ್ಭದಲ್ಲಿ ಗಂಡ ಸತ್ತ ನಂತರ ಅವನನ್ನು ಸಂಸ್ಕರಿಸಿದ ಚಿತೆಯಲ್ಲಿ ಧುಮುಕಿ ಸಾಯುವುದೇ ಒಬ್ಬ ಆದರ್ಶ ನಾರಿಯ ಧರ್ಮವಾಗಿತ್ತು. ಮಹಾಭಾರತದ ಮಾದ್ರಿಯಂತೆ, ವಿಜಯನಗರದಲ್ಲೂ ಸತಿ ಹೋಗುವುದು ಸಾಮಾಜಿಕ ನಂಬಿಕೆಯಾಗಿತ್ತು. ಸಾಮಾಜಿಕ ಕಟ್ಟುಪಾಡುಗಳನ್ನು ಆಚರಿಸದೆ ಹಾಗೆಯೇ ಬಿಡುವಂತಿರಲಿಲ್ಲ. ಹಾಗಾಗಿ ಆ ಸಂದರ್ಭದಲ್ಲಿ ಸತಿಪದ್ಧತಿ ಅನಿವಾರ್ಯವಾಗಿರಬೇಕೆಂಬ ಅಂಶ ತಿಳಿದು ಬರುವುದು. ಆದರೆ ಇಂದು ಕಾಲ ಬದಲಾಗಿದೆ. ಸತಿಪದ್ಧತಿಯನ್ನು ಆಚರಿಸುವುದು ಇರಲಿ ಅದಕ್ಕೆ ಪ್ರಚೋದನೆಯನ್ನು ನೀಡುವುದೂ ಸಹ ಘೋರ ಅಪರಾಧವಾಗಿದೆ. ನಿಜವಾಗಿಯೂ ಈ ಸ್ತ್ರೀಯರದು ಎಂತಹ ಸಂಕಟದ ಸ್ಥಿತಿ ಕೇವಲ ಗೌರವಕ್ಕಾಗಿ ಇಂತಹ ಕ್ರೂರವಾದ ಅಂತ್ಯಕ್ಕೆ ತಮ್ಮನ್ನು ಗುರಿಪಡಿಸಿಕೊಂಡರೆ? ಅಥವಾ ಜನರ ಮೂಢನಂಬಿಕೆಗೆ ಬಲಿಯಾದರೆ? ಇವರಿಗೆ ಜೀವದ ಮೌಲ್ಯ ಗೊತ್ತಿರಲಿಲ್ಲವೇ ಎಂಬ ಪ್ರಶ್ನೆಗಳು ಉದ್ಭವವಾಗುತ್ತವೆ. ಸಮಾಜವನ್ನು ನುಂಗಿ ನೊಣೆಯುತ್ತಿರುವ ಈ ಅನಿಷ್ಟ ಪದ್ಧತಿಯನ್ನು ತಡೆಯುವ ಪ್ರಯತ್ನವನ್ನು ಸ್ವತಃ ರಾಜರೂ ಮಾಡದಿರುವುದು, ಈ ಸಾಮ್ರಾಜ್ಯದ ದೌರ್ಬಲ್ಯವೆನ್ನಬಹುದು. ಸತ್ತವನೊಂದಿಗೆ ಜೀವಂತವಾಗಿ ತಮ್ಮ ಹಳ್ಳವನ್ನು ತೋಡಿಕೊಳ್ಳುವುದೆಂದರೇನು? ಮತ್ತೆ ಹುಟ್ಟಿ ಬರಲು ಹುಲುಬೀಜವೇ 'ಸತ್ತ ಗಂಡನೊಂದಿಗೆ ಜೀವಂತವಾಗಿ ಕುಣಿಯಲ್ಲಿ ಬಿದ್ದರೆ ಸ್ವರ್ಗ ಸಿಗುವುದೇ ಕೇವಲ ಆದರ್ಶದ ನೆಪದಲ್ಲಿ ಜೀವಿಯನ್ನು ದಹನ ಹಾಗೂ ದಪನ ಮಾಡುವುದು. ಇಡೀ ಸಾಮಾಜಿಕ ಮೂಢನಂಬಿಕೆಯನ್ನು ಪ್ರತಿಬಿಂಬಿಸುತ್ತದೆ.

೧೪ನೆಯ ಶತಮಾನದಲ್ಲಿ ಮುಸ್ಲಿಂ ಆಕ್ರಮಣವನ್ನು ತಡೆಗಟ್ಟುವುದಕ್ಕಾಗಿ ಸ್ಥಾಪನೆಗೊಂಡ ಬಲಿಷ್ಠ ಹಾಗೂ ಯುದ್ಧೋತ್ಸಾಹಿ ವಿಜಯನಗರ ಸಾಮ್ರಾಜ್ಯವು ಸಾಂಸ್ಕೃತಿಕವಾಗಿಯೂ ವಿಜಯವನ್ನು ಸಾಧಿಸಲು ವಾಸ್ತುಶಿಲ್ಪ ಹಾಗೂ ಶಿಲ್ಪಕಲೆಗೆ ವಿಶೇಷವಾಗಿ ಆದ್ಯತೆಯನ್ನು ಹಾಗೂ ಪ್ರೋತ್ಸಾಹವನ್ನು ನೀಡಿತ್ತು. ಈ

ಸಂದರ್ಭದಲ್ಲಿ ಹಂಪಿಯಲ್ಲಿ ಹಲವಾರು ದೇವಾಲಯಗಳು ನಿರ್ಮಾಣಗೊಂಡು ಜನರನ್ನು ಸದ್ಧರ್ಮ, ಸದ್ಭಕ್ತಿಯಲ್ಲಿ ಬೆರೆಯುವಂತೆ ಮಾಡಿದರು.

ವಿಜಯನಗರ ಸಾಮ್ರಾಟರು ಲಲಿತ ಕಲೆಗಳಿಗೆ ಹಾಗೂ ವಾಸ್ತುಶಿಲ್ಪಕ್ಕೆ ಪ್ರೋತ್ಸಾಹವಿತ್ತರು. ಶ್ರೀಮಂತರು ಹಾಗೂ ಜನಸಾಮಾನ್ಯರ ಅಭಿರುಚಿಗೆ ಪಾತ್ರವಾಗಿದ್ದ ಸಂಗೀತ, ನಾಟಕ ಮತ್ತು ನೃತ್ಯಕಲೆಗಳು ತುಂಬ ಅಭಿವೃದ್ಧಿಯನ್ನು ಹೊಂದಿದವು.

## ಹಂಪಿಯ ದೇವಾಲಯಗಳು

ಇವು ಸಾಂಸ್ಕೃತಿಕವಾಗಿ ಬಹಳ ಮುಖ್ಯವಾದವುಗಳು. "ಹಂಪಿಯ ಕೋಟೆಗಳು, ಮುಗಿಲಟ್ಟಣಿಗಳು, ಸ್ನಾನ ಘಟ್ಟಗಳು, ಪುಷ್ಕರಣಿಗಳೇ ಮೊದಲಾದ ಕಟ್ಟಡಗಳನ್ನು ಬಿಟ್ಟರೆ ನಮ್ಮ ಕಣ್ಣಿಗೆ ಪ್ರಧಾನವಾಗಿ ಕಂಡು ಬರುವ ಸ್ಮಾರಕಗಳೇ ದೇವಾಲಯಗಳು. ಅವುಗಳಲ್ಲಿ ಅನೇಕವು ಸಣ್ಣದಾಗಿಯು ಶಿಲ್ಪಾಲಂಕಾರ ರಹಿತವಾಗಿಯು ಇರುವವು. ಕೆಲವು ದೇಗುಲಗಳು ವಿಜಯನಗರಕ್ಕಿಂತ ಪೂರ್ವಕಾಲದ ಕದಂಬ, ಚಾಲುಕ್ಯ ಮತ್ತು ವಾಸ್ತುಶೈಲಿಗೆ ಸೇರಿದವು. ಹಂಪಿಯ ಪ್ರಧಾನ ಬೆಟ್ಟವಾದ ಹೇಮಕೂಟದ ಮೇಲೆ ಅನೇಕ ಸಣ್ಣಪುಟ್ಟ ಶಿವಾಲಯಗಳಿವೆ. ಈಗಿರುವ ದೇವಾಲಯಗಳಲ್ಲಿ ನಿಶ್ಚಿತವಾಗಿ ಕಾಲನಿರ್ಣಯ ಮಾಡಲು ಸಾಧ್ಯವಾದ ಅತ್ಯಂತ ಹಳೆಯ ಕಟ್ಟಡವೆಂದರೆ ಕ್ರಿ.ಶ. ೧೩೮೫ರ 'ಗಾಣಗಿತ್ತಿಯ ಜಿನಾಲಯ' ಇದಲ್ಲದೆ ಆನೆ ಲಾಯಕ್ಕೆ ಪೂರ್ವಭಾಗದಲ್ಲಿರುವ ಕ್ರಿ.ಶ. ೧೪೨೬ರ ಮತ್ತೊಂದು ಜಿನಾಲಯವಿದೆ."[೧೦]

ದೇವಾಲಯಗಳಲೆಲ್ಲಾ ಅತಿದೊಡ್ಡದಾದುದು ಪ್ರಸಿದ್ಧವಾದುದು. ಪಂಪಾಪತಿ ಅಥವಾ ವಿರುಪಾಕ್ಷ ದೇವಾಲಯ, ಮಾಲ್ಯವಂತ ಬೆಟ್ಟದ ಮೇಲಿರುವ ರಘುನಾಥ ದೇವಾಲಯ, ಅರಮನೆಯ ಹತ್ತಿರವಿರುವ ರಾಮಚಂದ್ರ ಮತ್ತು ಕೃಷ್ಣದೇವಾಲಯ ಸೇರಿದಂತೆ ಅನೇಕ ಉಪಕಟ್ಟಡಗಳು ಅನೇಕ ಕಂಬಗಳ ಜಗುಲಿಗಳು, ಕಲ್ಯಾಣಮಂಟಪಗಳು ಇದ್ದವು. ಮೂರು ದಿಕ್ಕುಗಳಲ್ಲಿ ಬಾಗಿಲುಗಳು ಅವುಗಳ ಮೇಲೆ ಏಳರಿಂದ ಒಂಬತ್ತು ಅಂತಸ್ತಿನ ಗೋಪುರಗಳನ್ನು ಕಟ್ಟಲಾಗಿತ್ತು. ಗೋಪುರಗಳನ್ನೆಲ್ಲ ಇಟ್ಟಿಗೆ ಮತ್ತು ಗಾರೆಗಳಿಂದ ಕಟ್ಟಲಾಗಿತ್ತು. ಅಲ್ಲದೆ ದೊಡ್ಡ ದೇವಾಲಯಗಳಿಗೆ ಸೇರಿದ ಪುಷ್ಕರಣಿಗಳು ಈ ಪುಷ್ಕರಣಿಗಳಲ್ಲಿ ದೇವರಿಗೆ ವರ್ಷಕ್ಕೊಮ್ಮೆ ತೆಪ್ಪೋತ್ಸವವನ್ನು ಮಾಡುತ್ತಲಿದ್ದರು. ಪ್ರತಿ ಪುಷ್ಕರಣಿಯಲ್ಲಿ ಗೋಪುರ ಸಹಿತವಾದ ಮಂಟಪ ಇರುತ್ತಿತ್ತು. ಪ್ರವಾಸಿಗರ ವರದಿಯಂತೆ ದೇವಾಲಯಗಳ ಮುಂದೆ ರಥ ಬೀದಿಗಳಿದ್ದು, ಇಕ್ಕೆಲಗಳಲ್ಲಿ ಅಂಗಡಿ ಸಾಲುಗಳನ್ನು ಕಾಣಬಹುದಾಗಿತ್ತು.

### ವಿಜಯ ವಿಠ್ಠಲ ದೇವಾಲಯ

"ವಿಜಯನಗರ ಕಾಲದ ಶಿಲ್ಪ ಮತ್ತು ವಾಸ್ತುಶೈಲಿಯ ಪರಾಕಾಷ್ಠೆಯನ್ನು ನೋಡಬೇಕಾದರೆ ೧೫-೧೬ನೇ ಶತಮಾನದ ವಿಜಯ ವಿಠ್ಠಲ ದೇವಾಲಯವನ್ನು ನೋಡಲೇಬೇಕು. ಇದರ ಶಿಲ್ಪಮಯವಾದ ಜೋಡಿ ಕಂಬಗಳು ಕಲ್ಲಿನಲ್ಲೆ ಉದ್ದಕ್ಕೂ ಕೆತ್ತಿರುವ ಇದರ ಮುಂಚಾಚುಗೊಂಡಿರುವ ದ್ವಿಭಂಗಿಸೂರು, ಈ ಸೂರುಗಳಿಗೆ ಬೆಂಬಲ ಕೊಡುವ ಚಾಚುಪೀಠಗಳು ಶಿಲ್ಪ ಕೌಶಲ್ಯದಿಂದ ಹೊದ್ದಿಸಲ್ಪಟ್ಟ ಕಂಬಗಳುಳ್ಳ ಮಂಟಪಗಳು ಎಲ್ಲಕ್ಕಿಂತಲೂ ಅಂದವಾದ ಅಲ್ಲಿನ ಕಲ್ಯಾಣಮಂಟಪಗಳು ಈ ಮಂಟಪಗಳ ಒಂದೇ ಕಲ್ಲಿನಲ್ಲಿ ಕೆತ್ತಿರುವ ಕುದುರೆ ಮತ್ತು ಸಿಂಹಗಳಿಂದ ಅಲಂಕೃತವಾಗಿರುವ ಕಂಬಗಳ ಶಿಲ್ಪ ಕೌಶಲ್ಯ ಪ್ರವಾಸಿಗರನ್ನು ವಿಸ್ಮಯಗೊಳಿಸುತ್ತದೆ. ಈ ದೇವಾಲಯದ ಅಂಗಳ ಸುಮಾರು ೫೦೦ ಅಡಿ ಉದ್ದ ಹಾಗೂ ೨೦೦ ಅಡಿ ಅಗಲವಾಗಿದೆ. ಇದರ ಸುತ್ತಲೂ ಅನೇಕ ಕಂಬಗಳ ಮೊಗಸಾಲೆ ಇದೆ. ಈ ದೇವಾಲಯದ ಮೂರು ಬಾಗಿಲುಗಳ ಮೇಲೂ ಎತ್ತರವೂ ಸುಂದರವೂ ಆದ ಗೋಪುರಗಳಿದ್ದವು. ವಿಠಲ ದೇವಾಲಯದಲ್ಲಿ ಎಲ್ಲರಿಗೂ ಬೆರಗುಗೊಳಿಸುವಂತಹ ಒಂದು ಶಿಲ್ಪ ದೇವಾಲಯದ ಅಂಗಳದಲ್ಲಿ ನಿಂತಿರುವ ಕಲ್ಲಿನ ರಥ ಇದು ಒಂದೇ ಶಿಲೆಯಲ್ಲಿ ನಿರ್ಮಿಸಲಾಗಿದ್ದು, ಅದರ ನಾಲ್ಕೂ ಚಕ್ರಗಳು ಬೇರೆಯಾಗಿದ್ದು ಜೋಡಿಸಲಾಗಿದೆ. ಕೆಲವು ದಶಕಗಳ ಹಿಂದೆ ಈ ರಥದ ಮೇಲೆ ಇಟ್ಟಿಗೆಯಿಂದ ಕಟ್ಟಿದ ಒಂದು ಸಣ್ಣ ಗೋಪುರವೂ ಸಹ ಇತ್ತು. ಗರ್ಭಗುಡಿಯ ಈಶಾನ್ಯಕ್ಕೆ ಗುಡಿಯ ಹೊರಭಾಗದಲ್ಲಿ ರಾಜನನ್ನು ತೂಗುವ ತಕ್ಕಡಿಯೊಂದಿದೆ. ಇದು ಎತ್ತರವಾದ ಕಲ್ಲುಕಂಬದಿಂದಲೂ ಜಂತಿಯಿಂದಲೂ ಕಟ್ಟಲ್ಪಟ್ಟಿರುವುದು. ರಾಜನ ಹುಟ್ಟು ಹಬ್ಬದ ದಿನ, ವಿಜಯಯಾತ್ರೆಯ ದಿನ ಮತ್ತು ಪಟ್ಟಾಭಿಷೇಕದ ವರ್ಷಾಚರಣೆಯ ಸಂದರ್ಭಗಳಲ್ಲಿ ಅರಸನು ತಕ್ಕಡಿಯಲ್ಲಿ ಕುಳಿತು ತನ್ನ ತೂಕಕ್ಕೆ ಸರಿಸಮನಾದ ನಾಣ್ಯಾಭರಣಗಳನ್ನು ಮತ್ತೊಂದು ಕಡೆಯಲ್ಲಿಟ್ಟು ತೂಕ ಮಾಡಿದ ಆ ಐಶ್ವರ್ಯವನ್ನೆಲ್ಲಾ ಗುಡಿಗಳಿಗೂ, ಸಾಧುಸಂತರಿಗೂ ಬಡವರಿಗೂ ದಾನ ಮಾಡುತ್ತಿದ್ದನೆಂದು ತಿಳಿದುಬರುತ್ತದೆ."[೧೧]

ಬಹುಶಃ ಇದರಲ್ಲಿ ಉಯ್ಯಾಲೆಯನ್ನು ಕಟ್ಟಿ ಉತ್ಸವಾದಿ ದಿನಗಳಲ್ಲಿ ದೇವರನ್ನು ಇಲ್ಲಿ ಕೂಡಿಸಿ ಪೂಜೆ ನಡೆಸುತ್ತಿರಬೇಕೆಂದು ತೋರುತ್ತದೆ. ಕೃಷ್ಣದೇವರಾಯನೂ, ಅಚ್ಯುತರಾಯನೂ ತುಲಾಭಾರ ಮಹೋತ್ಸವವನ್ನು ನಡೆಸಿದ್ದಕ್ಕೆ ದಾಖಲೆಯುಂಟು.

### ಹಜಾರರಾಮನ ದೇವಾಲಯ

ಹಂಪಿಯಲ್ಲಿ ಅಗಣಿತ ದೇವಾಲಯಗಳಿವೆ. ಅವುಗಳಲ್ಲಿ ಮುಖ್ಯವಾದ ದೇವಾಲಯಗಳು ಪ್ರಸಿದ್ಧವಾಗಿವೆ. ಅಂತಹ ದೇವಾಲಯಗಳಲ್ಲಿ ರಾಮಚಂದ್ರ ದೇವಾಲಯ ದೊಡ್ಡ ಪ್ರಮಾಣದ್ದು ಸಂಪೂರ್ಣವಾಗಿ ಕಲ್ಲುಕಟ್ಟಡವನ್ನು ಹೊಂದಿದ್ದು ಅರಮನೆಗೆ ಅಷ್ಟು ಹತ್ತಿರದಲ್ಲಿರುವುದನ್ನು ನೋಡಿದರೆ

ಬಹುಶಃ ಅರಸು ಕುಟುಂಬದವರಿಗೆ ಮಾತ್ರ ಈ ದೇವಾಲಯವು ಸೀಮಿತವಾಗಿರಬೇಕು. ಇದು ಹಜಾರ (ಆವರಣ)ವನ್ನು ಒಳಗೊಂಡಿದ್ದರಿಂದ ಇದನ್ನು ಹಜಾರರಾಮ ದೇವಾಲಯ ಎನ್ನಲಾಗಿದೆ. ದೇವಾಲಯದ ಹೊರಗೋಡೆಯ ಮೇಲೆ ಕೆತ್ತನೆ ಮಾಡಿರುವ ರಾಮಾಯಣ, ಮಹಾಭಾರತ ಪುರಾಣ ಕಾವ್ಯಗಳಿಂದ ಆರಿಸಿದಂತಹ ಶಿಲ್ಪ ಚಿತ್ರಗಳನ್ನು ಆನೆ ಸಾಲು, ಕುದುರೆ ಸಾಲು, ಸಾಲು ನರ್ತಕಿಯರು, ಸೈನಿಕ ಸಾಲು ಮೊದಲಾದ ಇತರ ಶಿಲ್ಪಗಳು ಉಬ್ಬುಶಿಲ್ಪಗಳು ಬಹಳ ಸುಂದರವಾಗಿ ಕೆತ್ತನೆಯಾಗಿವೆ.

ಈ ದೇವಾಲಯದ ಶಿಲ್ಪ ಸಾಲಿಗೂ, ದಸರಾದಿಬ್ಬದ ಶಿಲ್ಪ ಸಾಲಿಗೂ ಹೋಲಿಕೆಯಿರುವುದನ್ನು ಗಮನಿಸಿದರೆ ಬಹುಶಃ ಎರಡು ಕಟ್ಟಡಗಳೂ ಒಂದೇ ಕಾಲದಲ್ಲಿ ರಚನೆಯಾಗಿರಬಹುದು.

### ವಿರೂಪಾಕ್ಷ ದೇವಾಲಯ

ಈಗಲೂ ನಿತ್ಯಪೂಜೆಗೊಳ್ಳುವ ಪ್ರಸಿದ್ಧ ದೇವಾಲಯವೆಂದರೆ ವಿರೂಪಾಕ್ಷ ಅಥವಾ ಪಂಪಾಪತಿ ದೇವಾಲಯ ಹಂಪೆ ಎಂದರೆ ಪಾರ್ವತಿ, ಪತಿ ಎಂದರೆ ಗಂಡ ಅಥವಾ ಒಡೆಯ ಪಾರ್ವತಿಯ ಗಂಡ ಅಥವಾ ಶಿವ. ಗರ್ಭಗೃಹದಲ್ಲಿ ಪೂಜೆಗೊಳ್ಳುವ ದೇವರು ಶಿವಲಿಂಗವಾಗಿದೆ. ಈ ದೇವಾಲಯದ ಮೂಲವು ವಿಜಯನಗರ ಕಾಲಕ್ಕಿಂತ ಹಳೆಯದಾದ ಶೈವ ದೇವಾಲಯ ಅದರ ಸುತ್ತಲೂ ಅನೇಕ ಕಟ್ಟಡಗಳಿವೆ. ಈ ಕಟ್ಟಡಗಳನ್ನು ವಿಜಯನಗರ ಕಾಲದಲ್ಲಿ ಕಟ್ಟಲಾಗಿದೆ. ಗರ್ಭಗುಡಿಯ ಮುಂದಿರುವ ರಂಗಮಂಟಪವನ್ನು ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ (ಛಾವಣಿ) ವರ್ಣಚಿತ್ರಗಳಿವೆ. ಈ ದೇವಾಲಯದಲ್ಲಿ ಪಾರ್ವತಿ ದೇವಿಗೆ ಪ್ರತ್ಯೇಕವಾದ ಗರ್ಭಗುಡಿಯನ್ನು ಕಾಣಬಹುದು. ವಿದೇಶಿಯಾತ್ರಿಕ ಪಯಾಸ್ ಹೇಳುವಂತೆ ಈ ದೇವಾಲಯದ ಹೆಬ್ಬಾಗಿಲು ತುಂಬಾ ಅಗಲವಾಗಿದೆ. ದೇವಾಲಯದ ಗೋಪುರ ದೂರದಿಂದಲೇ ಯಾತ್ರಿಕರನ್ನು ಆಕರ್ಷಿಸುತ್ತದೆ.

ವಿರೂಪಾಕ್ಷ ದೇವಾಲಯಕ್ಕೆ ಹೋಗುವ ದಾರಿಯಲ್ಲಿ ಕಣ್ಣಿಗೆ ಬೀಳುವ ಸಾದಾಕಂಬಗಳಿಂದ ನಿರ್ಮಿಸಿದ ದೊಡ್ಡ ಮಂಟಪದಲ್ಲಿ ಬೃಹತ್ ಗಾತ್ರದ ಗಣೇಶನ ಮೂರ್ತಿಯಿದೆ. ಅದಕ್ಕೆ ಸಾಸುವೆಕಾಳು ಗಣೇಶ ಎಂಬ ಅಣಕದ ಹೆಸರು ನೀಡಲಾಗಿದೆ. ಇನ್ನೂ ಸ್ವಲ್ಪ ದೂರ ಹೋದರೆ ಇನ್ನೊಂದು ಮಂಟಪದಲ್ಲಿರುವ ಗಣಪತಿಗೆ ಕಡಲೆಕಾಳು ಗಣೇಶ ಎನ್ನಲಾಗುವುದು. ಬೃಹತ್‌ಗಾತ್ರದ ಉಗ್ರನರಸಿಂಹ, ಬಡವಿಲಿಂಗ, ಉದ್ದಾನವೀರಭದ್ರ ಮುಂತಾದ ವಿಗ್ರಹಗಳಿವೆ ಹಾಗೂ ಇನ್ನೂ ಹಲವಾರು ದೇವಾಲಯಗಳಿವೆ. ಅವುಗಳಲ್ಲಿ ಹೊಸಪೇಟೆಯ ಅನಂತಶಯನಗುಡಿ (ವಿಷ್ಣು), ಮಾಲ್ಯವಂತ ಬೆಟ್ಟದ ಮೇಲಿರುವ ರಘುನಾಥ ದೇವಾಲಯ, ಅಚ್ಯುತರಾಯ ದೇವಾಲಯ ಅಥವಾ ತಿರುವೇಂಗಲರಾಯ ದೇವಾಲಯ, ಪಟ್ಟಾಭಿರಾಮ ದೇವಾಲಯ, ಹಾಗೂ ಕೃಷ್ಣಸ್ವಾಮಿ ದೇವಾಲಯಗಳನ್ನು ಹೆಸರಿಸಬಹುದು.

ವಿಜಯನಗರ ಅರಸರು ಮುಸ್ಲಿಂ ವಾಸ್ತುಶಿಲ್ಪ ಶೈಲಿಯಿಂದಲೂ ಪ್ರಭಾವಿತರಾಗಿದ್ದರು ಎಂಬುದಕ್ಕೆ ಹಂಪಿಯಲ್ಲಿರುವ ಕೆಲವು ಸ್ಮಾರಕಗಳನ್ನು ಉದಾಹರಿಸಬಹುದು. ರಾಣಿಯರ ಸ್ನಾನಗೃಹ, ಕಮಲ್‌ಮಹಲ್, ಗಜಶಾಲೆ ಇತ್ಯಾದಿಗಳನ್ನು ವೀಕ್ಷಿಸಿದಾಗ ಮುಸ್ಲಿಂ ಶೈಲಿಯಲ್ಲಿರುವ ಸ್ಮಾರಕಗಳು ಇನ್ನೂ ಉಳಿದುಕೊಂಡು ಬಂದಿವೆ. ಕಾರಣ ಬಿಜಾಪುರದ ಸುಲ್ತಾನರು ತಮ್ಮ ಶೈಲಿಯಲ್ಲಿರುವ ಯಾವ ಕಟ್ಟಡಗಳಿಗೂ ಕೈಹಚ್ಚದೆ (ಹಾಳು ಮಾಡದೆ) ಕೇವಲ ಹಿಂದೂ ದೇವಾಲಯಗಳನ್ನು ಹಾಗೂ ಅರಮನೆಗಳನ್ನು ನಾಶ ಮಾಡಿರುವುದನ್ನು ಗಮನಿಸಬಹುದು.

ವಿಜಯನಗರದ ದೊರೆಗಳು ತಿರುಪತಿ, ಕಂಚಿ, ಚಿದಂಬರಂ, ತಾಡಪತ್ರಿ, ಕಾಳಹಸ್ತಿ, ಲೇಪಾಕ್ಷಿ, ಶ್ರೀಶೈಲ ಇತ್ಯಾದಿ ಕಡೆಗಳಲ್ಲಿಯ ದೇವಾಲಯಗಳಿಗೆ ಉದಾರ ದಾನದತ್ತಿಗಳನ್ನು ಕೊಟ್ಟಿದ್ದರು.

ವಿಜಯನಗರ ಸಾಮ್ರಾಜ್ಯ ಪತನದ ನಂತರ ಆ ಕಾಲದ ಎಲ್ಲ ಮೂರ್ತಿಶಿಲ್ಪಗಳು ಭಗ್ನಗೊಂಡಿದ್ದು ಇಂದು ಶಿಲ್ಪಗಳನ್ನು ಕಮಲಾಪುರದ ವಸ್ತುಸಂಗ್ರಹಾಲಯದಲ್ಲಿ ಸಂರಕ್ಷಿಸಲಾಗಿದೆ. ಅವುಗಳಲ್ಲಿ ಈ ಕೆಳಕಂಡ ಶಿಲ್ಪಗಳನ್ನು ಹೆಸರಿಸಬಹುದು. ಶಿವನ ಸಂಹಾರ ಮೂರ್ತಿಗಳ ಪ್ರತೀಕಗಳಾದ ವೀರಭದ್ರ, ಭೈರವ ಇವುಗಳ ಜೊತೆಗೆ ಕಾಳಿ, ಭದ್ರಕಾಳಿ, ಮಹಿಷಮರ್ದಿನಿ ಜೊತೆಗೆ ಲೀಲಾಮೂರ್ತಿ ಸ್ವರೂಪವಾದ ಉಮಾಮಹೇಶ್ವರ ಗಣೇಶ ವಿಗ್ರಹ, ಪದ್ಮಪೀಠದಲ್ಲಿ ಸರ್ಪಾಲಂಕೃತ ವೃಕ್ಷದ ಕೆಳಗೆ ಶಕ್ತಿಸಹಿತ ದಶಭುಜ ಕೆಲವು ರುಂಡವಿಲ್ಲದ ವೀರಭದ್ರನ ವಿಗ್ರಹಗಳಿವೆ. ಇವು ಶೈವರಿಗೆ ಸಂಬಂಧಿಸಿದ ಮೂರ್ತಿಶಿಲ್ಪಗಳಾದರೆ ವೈಷ್ಣವರಿಗೆ ಸಂಬಂಧಿಸಿದ ಮೂರ್ತಿಶಿಲ್ಪಗಳಾದರೆ ವೈಷ್ಣವರಿಗೆ ಸಂಬಂಧಿಸಿದಂತೆ ವಿಷ್ಣುವಿನ ಅನೇಕ ರೂಪಗಳನ್ನು ಪ್ರತಿಬಿಂಬಿಸುವ ವಿಷ್ಣುವಿನ ಹಲವು ಅವತಾರಗಳಾದ ವರಾಹ, ನರಸಿಂಹ ಮತ್ತು ಶ್ರೀನಿವಾಸ ಶಿಲ್ಪಗಳಿವೆ. ಹನುಮಂತ ಮತ್ತು ಗರುಡನ ಆಳೆತ್ತರದ ವಿಗ್ರಹಗಳು ಮನಸೆಳೆಯುತ್ತವೆ. ಇದರ ಜೊತೆಗೆ ವಿಷ್ಣುಭಕ್ತರಾದ ಆಳ್ವಾರರುಗಳ ವಿಗ್ರಹಗಳಿವೆ. ಪ್ರಾರಂಭದಲ್ಲಿ ಸೂಕ್ಷ್ಮವಾಗಿ ಕೆತ್ತಲ್ಪಟ್ಟ ಕಂಚಿನ ವಿಗ್ರಹಗಳನ್ನು ನೆನಪಿಗೆ ತರುವ ಶ್ರೀದೇವಿ ಮತ್ತು ಭೂದೇವಿ ಸಹಿತ ಇರುವ ಶ್ರೀರಂಗನಾಥನ ವಿಗ್ರಹವು ಮನಮೋಹಕವಾಗಿದೆ. ರಂಗನಾಥನ ಪಾದದಡಿಯಲ್ಲಿ ಸುಂದರವಾದ ಕಮಲವನ್ನು ಕೆತ್ತಲಾಗಿದೆ. ಚತುರ್ಭುಜ ಲಕ್ಷ್ಮಿ, ಆಸೀನ ವಿಷ್ಣು ಮತ್ತು ಲಕ್ಷ್ಮೀನರಸಿಂಹ ಮೂರ್ತಿಗಳು ವಿಜಯನಗರ ಶೈಲಿಯ ಪ್ರಮುಖ ಶಿಲ್ಪಗಳಾಗಿವೆ. ವರಾಹ ಶಿಲ್ಪದ ಮುಖಭಾವವು ನೋಡುಗರಿಗೆ ಅಚ್ಚರಿ ಮೂಡಿಸುತ್ತದೆ. ನೈಜತೆಯನ್ನು ಹೊಂದಿರುವ ಅಶೋಕ ವನದಲ್ಲಿ ಸೀತೆ, ರಥಿಕರಾದ ಕೃಷ್ಣಾರ್ಜುನರು ವೇಣುಗೋಪಾಲ ಆಳ್ವಾರರುಗಳ ಗಾರೆಗಚ್ಚಿನ ಶಿಲ್ಪಗಳಿವೆ.

ವಿಜಯನಗರದ ಅರಸರು ಉಪಯೋಗಿಸುತ್ತಿದ್ದ ಸೂಕ್ಷ್ಮ ಕಂಚಿನ ಹಾಗೂ ಲೋಹದ ಪ್ರತಿಮೆಗಳನ್ನು, ದಾನಶಾಸನ ತಾಮ್ರಫಲಕಗಳನ್ನು, ತಾಳೆಗರಿಯ ಹಸ್ತಪ್ರತಿಗಳನ್ನು, ಹಿತ್ತಾಳೆಯ ಹರಿವಾಣಗಳನ್ನು ಮತ್ತು ಮಡಿಕೆ ಕುಡಿಕೆಗಳನ್ನು ಸಂರಕ್ಷಿಸಲಾಗಿದೆ. ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವರಾಯ, ವೆಂಕಟರಾಯ,

ರಾಮರಾಯ ಮತ್ತು ತಿರುಮಲರಾಯರ ಕಾಲದ ಚಿನ್ನದ ಮತ್ತು ತಾಮ್ರದ ನಾಣ್ಯಗಳು ದೊರಕಿವೆ. ಇದರ ಜೊತೆಗೆ ಕ್ರಿ.ಶ. ೧೮ರ ಸುಮಾರಿನಲ್ಲಿ ಚಿತ್ರಿಸಿರುವ ಶ್ರೀರಾಮಪಟ್ಟಾಭಿಷೇಕದ ವರ್ಣಚಿತ್ರವು ನೋಡುಗರ ಗಮನಸೆಳೆಯುತ್ತದೆ. ಲೇಪನ ತಾಂತ್ರಿಕತೆಯಿಂದ ಕೂಡಿರುವ ಈ ವರ್ಣಚಿತ್ರದಲ್ಲಿ ಉಡುಗೆ-ತೊಡಿಗೆಗಳನ್ನು ಅಮೂಲ್ಯ ಮಣಿಗಳಿಂದ ಹಾಗೂ ಬಣ್ಣದ ಗಾಜಿನ ತುಣುಕುಗಳಿಂದ ಅಲಂಕರಿಸಲಾಗಿದೆ. ಈ ವರ್ಣಚಿತ್ರದಲ್ಲಿ ಯುರೋಪಿನ ರಿನೈಸಾನ್ಸ ಕಾಲದ ಕ್ರೈಸ್ತಕಲೆಯ ಪ್ರಭಾವವನ್ನು ಕಾಣಬಹುದು.

## ವಿಜಯನಗರ ಕಾಲದ ನಾಣ್ಯಗಳು

ವಿದ್ವಾಂಸರು ಭಾರತದಲ್ಲಿ ನಾಣ್ಯಗಳ ಪ್ರಾರಂಭ ಕಾಲವನ್ನು ಕ್ರಿ.ಶ.ಸು. ಏಳನೆಯ ಶತಮಾನಕ್ಕೆ ಕೊಂಡೊಯ್ದಿದ್ದಾರೆ. ವೇದಕಾಲದ ಭಾರತದ ಆರ್ಥಿಕ ವ್ಯವಸ್ಥೆಯ ಬಗ್ಗೆ ನಿರ್ದಿಷ್ಟ ಆಧಾರ ದೊರಕದಿದ್ದರೂ ಆ ಕಾಲದಲ್ಲಿ ಉಲ್ಲೇಖಗೊಂಡಿರುವ ನಿಷ್ಕ ಮತ್ತು ಶತಮಾನ ಎಂಬುದರಿಂದ ಒಂದು ಅಳತೆಯ ಮಾಪನವಿರಬಹುದು ಎಂದು ಊಹಿಸಬಹುದು. ಕ್ರಿ.ಶ. ೪, ೫ನೇ ಶತಮಾನದಿಂದ ಭಾರತದ ಉದ್ದಗಲಕ್ಕೂ ಸರ್ವಸಮ್ಮತವಾದ ಮುದ್ರಾಂಕಿತ ನಾಣ್ಯಗಳು ದೊರೆಯಲಾರಂಭಿಸುತ್ತವೆ. ಕರ್ನಾಟಕವನ್ನಾಳಿದ ಅನೇಕ ಅರಸು ಮನೆತನಗಳು ತಮ್ಮದೇ ಆದ ನಾಣ್ಯ ವ್ಯವಸ್ಥೆಯನ್ನು ಹೊಂದಿದ್ದರು. ದಕ್ಷಿಣ ಭಾರತದ ಬಹುಭಾಗವನ್ನಾಳಿದ ವಿಜಯನಗರದ ಅರಸರು ಮೊದಲಿಗೆ ಹೊಯ್ಸಳ ನಾಣ್ಯಗಳ ನಮೂನೆಯನ್ನು ಅನುಸರಿಸಿ ಕೆಲವು ಸಣ್ಣಪುಟ್ಟ ಬದಲಾವಣೆಗಳನ್ನು ಮಾಡಿಕೊಂಡರು. ಇದರ ಬಗ್ಗೆ ಸಮಕಾಲೀನ ವಿದೇಶಿ ಪ್ರವಾಸಿಗರಾದ ಡೊಮಿಂಗೋ ಪಯಾಸ್, ಅಬ್ದುಲ್ ರಜಾಕ್, ದುಆರ್ತೆ, ಬಾರ್ಬೋಸಾ ಅವರು ತಮ್ಮ ಪ್ರವಾಸ ಕಥನಗಳಲ್ಲಿ ಉಲ್ಲೇಖಿಸಿದ್ದಾರೆ. ನಾಣ್ಯಗಳ ವಿವಿಧ ಹೆಸರುಗಳ ಬಗ್ಗೆ ಅರಿತುಕೊಳ್ಳಲು ಸಮಕಾಲೀನ ಶಾಸನಗಳು ಸಹಕಾರಿಯಾಗಿವೆ. ಮೊದಲನೇ ಹರಿಹರನು ಪ್ರಪ್ರಥಮ ಬಾರಿಗೆ ನಾಣ್ಯಗಳ ಟಂಕಶಾಲೆಯ ಮೇಲೆ ಅಧಿಕಾರವನ್ನು ಹೊಂದಿದ್ದು ಮುದ್ರಿತ ನಾಣ್ಯಗಳ ಬಗ್ಗೆ ಮುದ್ರಿಕೆಯಲ್ಲಿ ಬದಲಾವಣೆ ತಂದು ರಾಜ್ಯದ ಸಂಪದವನ್ನು ಹೆಚ್ಚು ಪಾಲು ಚಿನ್ನದ ನಾಣ್ಯಗಳ ರೂಪದಲ್ಲಿಯೇ ಕ್ರೋಢೀಕೃತವಾಗುವಂತೆ ಕರವನ್ನು ವಿಧಿಸಿದನು. ಚಿನ್ನದ ನಾಣ್ಯಗಳ ಪರಿಶುದ್ಧತೆಯನ್ನು ಕಾಪಾಡಲು ಟಂಕಶಾಲೆಯಲ್ಲಿ ಯಾವಾಗಲೂ ಒಬ್ಬ ಅಕ್ಕಸಾಲಿಗನು ತನ್ನ ಸಲಕರಣೆಗಳೊಂದಿಗೆ ಸಿದ್ಧನಾಗಿದ್ದನೆಂದು ಬಾರ್ಬೋಸಾ ತಿಳಿಸಿದ್ದಾನೆ. ರಾಜಧಾನಿಯಾದ ವಿಜಯನಗರ (ಹಂಪಿ) ಮಂಗಳೂರು ಹಾಗೂ ಬಾರ್ಕೂರುಗಳಲ್ಲಿಯೂ ರಾಜ ಟಂಕಸಾಲೆಗಳಿದ್ದ ಬಗ್ಗೆ ಆ ನಾಣ್ಯಗಳಿಂದ ತಿಳಿದು ಬರುತ್ತದೆ. ಗುಂಡಿಕೋಟೆ, ದೇವನೂರು, ಪೆನುಗೊಂಡೆ, ತಿರುಪತಿ, ಗುತ್ತಿ, ಆದೋನಿ, ತಾಡಪತ್ರಿ ನಲ್ಲೂರುಗಳಲ್ಲಿ ಸ್ಥಳೀಯ ಟಂಕಸಾಲೆಗಳಿದ್ದು, ರಾಯಚೂರು ಜಿಲ್ಲೆಯ ಕಡೇಕಲ್ಲಿನಲ್ಲಿ ವಿಜಯನಗರ ನಾಣ್ಯಗಳ ಅಚ್ಚುಗಳು ಹಾಗೂ ನಾಣ್ಯಗಳು ದೊರೆತಿರುವುದಲ್ಲದೆ ಮಹಾರಾಷ್ಟ್ರ ರಾಜ್ಯದ ಅಕೋಲ ಜಿಲ್ಲೆಯ ಬೇಸನ್ ಎಂಬುಲ್ಲಿಯೂ ವಿಜಯನಗರ ಕಾಲದ ಚಿನ್ನದ

ನಾಣ್ಯಗಳು ದೊರೆತಿವೆ. ಎರಡನೇ ಹರಿಹರನ (ಕ್ರಿ.ಶ. ೧೩೭೭-೧೪೦೪) ಸಾಮಂತನಾಗಿದ್ದ ಲಕ್ಕಣ ದಂಡಾದೀಶನು ತನ್ನ ಹೆಸರಿನಲ್ಲಿಯೇ ನಾಣ್ಯಗಳನ್ನು ಮುದ್ರಿಸಿರುವುದರಿಂದ ವಿಜಯನಗರ ಕಾಲದಲ್ಲಿ ಸ್ಥಳೀಯ ಅಧಿಕಾರಿಗಳು ಹಾಗೂ ಸಾಮಂತರು ತಮ್ಮ ತಮ್ಮ ಹೆಸರಿನಲ್ಲಿ ನಾಣ್ಯಗಳನ್ನು ಮುದ್ರಿಸಲು ಅನುಮತಿ ಹೊಂದಿದ್ದರೆಂದು ತಿಳಿದುಬರುತ್ತದೆ. ವಿಜಯನಗರದ ನಾಣ್ಯಗಳಲ್ಲಿ ಗದ್ಯ, ವರಾಹ, ಪೊನ್, ಪಗೋಡಾ, ಪ್ರತಾಪ್, ಕಾಟಿ, ಪಣ (ಬೇಳೆ) ಹಾಗ ಮತ್ತು ವ್ರಕ ಎಂಬಿವುಗಳು ಚಿನ್ನದ ನಾಣ್ಯಗಳಾದರೆ, ತಾರಾ ಎನ್ನುವುದು ಬೆಳ್ಳಿಯ ನಾಣ್ಯವಾಗಿತ್ತು. ದುಗ್ಗಾನಿ, (ಕಾನಿ) ಜೀತಲ್ ಮತ್ತು ಕಾಸು ಎಂಬಿವು ತಾಮ್ರದ ನಾಣ್ಯಗಳಾಗಿದ್ದವು. ನಾಣ್ಯದ ಮುಂಭಾಗದಲ್ಲಿ ಅನೇಕ ಪ್ರಾಣಿಗಳ, ಹಿಂದೂ ದೇವತೆಗಳ ಚಿತ್ರಣವಿದ್ದು, ನಾಣ್ಯದ ಹಿಂಭಾಗದಲ್ಲಿ ಅದನ್ನು ಟಂಕಿಸಿದ ರಾಜನ ಹೆಸರನ್ನು ಕನ್ನಡ ಅಥವಾ ದೇವನಾಗರಿ ಲಿಪಿಯಲ್ಲಿ ಸೂಚಿಸಿದ್ದಾರೆ. ಕೆಲವು ನಾಣ್ಯಗಳು ತೆಲುಗು ಭಾಷೆಯ ಬರಹವನ್ನು ಕೂಡ ಹೊಂದಿರುತ್ತವೆ. ಚಿನ್ನದ ನಾಣ್ಯಗಳು ಸುಮಾರು ೧೨೦-೧೨೫ ರಿಂದ ೬ ಗುಲಗಂಜಿಗಳ (Grains) ತೂಕವಿದ್ದು ತಾಮ್ರದ ನಾಣ್ಯಗಳು ೧೫೮-೧೫ ಗುಲಗಂಜಿಗಳ ತೂಕವಿರುತ್ತದೆ. ಇಲ್ಲಿ ವೀರ ಹರಿಹರ, ೧ನೇ ದೇವರಾಯ, ೨ನೇ ದೇವರಾಯ, ಕೃಷ್ಣದೇವರಾಯ, ಅಚ್ಚುತರಾಯ, ಸದಾಶಿವರಾಯ, ರಾಮರಾಯ, ತಿರುಮಲರಾಯ, ವೆಂಕಟರಾಯ ಮುಂತಾದ ಅರಸರ ಕಾಲದ ಚಿನ್ನ ಮತ್ತು ತಾಮ್ರದ ನಾಣ್ಯಗಳು ಸಿಕ್ಕ ವಿವರಗಳಿವೆ.

### ವಿಜಯನಗರ ಕಾಲದ ಚಿತ್ರಕಲೆ

ಶಿಲ್ಪಕಲೆ ಮತ್ತು ವಾಸ್ತುಶಿಲ್ಪದಂತೆ ಚಿತ್ರಕಲೆಯು ಈ ಕಾಲದಲ್ಲಿ ಅಭಿವೃದ್ಧಿ ಹೊಂದಿತು. ವಿಜಯನಗರ ಸಾಮ್ರಾಜ್ಯಕ್ಕಿಂತ ಹಿಂದಿನ ಸಾಮ್ರಾಜ್ಯದ ಚಿತ್ರಕಲೆಯು ಲಭ್ಯವಿರುವುದಿಲ್ಲ. ಆದರೆ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಚಿತ್ರಕಲೆಗೆ ವಿಶೇಷ ಆದ್ಯತೆಯನ್ನು ನೀಡಲಾಯಿತು. "ಹಂಪೆಯ ವಿರೂಪಾಕ್ಷ ದೇವಾಲಯ, ಲೇಪಾಕ್ಷಿಯ ವೀರಭದ್ರ ಆನೆಗೊಂದಿಯ ಹುಚ್ಚಪ್ಪಯ್ಯನ ಮಠ, ತಂಜಾವೂರಿನ ಬೃಹದೇಶ್ವರ ದೇವಾಲಯ, ಚಿದಂಬರದ ಶಿವಕಾಮ ಸುಂದರಿ ದೇವಾಲಯಗಳಲ್ಲಿ ಇಂದಿಗೂ ಚಿತ್ರ ಕಲೆಯ ಸಾಕ್ಷಾಧಾರಗಳಿವೆ. ಇವುಗಳಲ್ಲದೆ ಚಿಪ್ಪರಗಿ, ತಿರುಪತಿ, ಕದಿರಿ, ರಾಯಕೋಟೆ, ಕುಂಬಕೋಣಂ, ಶ್ರೀರಂಗಂ, ಕಾಳಹಸ್ತಿ, ತಾಡಪತ್ರಿ ದೇವಾಲಯಗಳಲ್ಲೂ ಈ ಕಾಲದ ಚಿತ್ರಕಲೆಯನ್ನು ಗಮನಿಸಬಹುದು. ಆದರೆ ಸಂರಕ್ಷಣೆ ಇಲ್ಲವಾದ್ದರಿಂದ ಇವುಗಳ ಪೂರ್ಣ ಚಿತ್ರಕಲೆ ಇಂದು ಲಭ್ಯವಿಲ್ಲವಾಗಿದೆ. ವಿಜಯನಗರದ ಚಿತ್ರಕಲೆಯಲ್ಲಿ ಲೇಪಾಕ್ಷಿ ಪ್ರಮುಖವಾದುದಾಗಿದೆ. ಇಲ್ಲಿಯ ವೀರಭದ್ರ ದೇವಾಲಯದ ಆವರಣದಲ್ಲಿ ಹಸಿರು, ಹಳದಿ, ನೀಲಿ, ಕಪ್ಪು, ಕೆಂಪು ಬಣ್ಣಗಳಲ್ಲಿ ದೇವತೆಗಳ ಸಾಮಂತರ ಸುಂದರ ಸ್ತ್ರೀಯರ ಹೂ ಬಳ್ಳಿಗಳ ದೃಶ್ಯಗಳು ಮನೋಜ್ಞವಾಗಿ ಚಿತ್ರಿತವಾಗಿವೆ. ಕಾಲಾಂತರದಲ್ಲಿ ಕೆಂಪು, ಕಪ್ಪು ಬಣ್ಣಗಳು ಮಾತ್ರ ಪ್ರಧಾನವಾಗಿದ್ದು ಉಳಿದ ಬಣ್ಣಗಳು ಮಸುಕಾಗಿವೆ. ಇಲ್ಲಿನ ಪೌರಾಣಿಕ ದೃಶ್ಯಗಳಲ್ಲಿ ಪ್ರಮುಖವಾದವು.

ಗಿರಿಜಾಕಲ್ಯಾಣ, ರಾಮಪಟ್ಟಾಭಿಷೇಕ, ಮೋಹಿನಿ ಬಸ್ಮಾಸುರ, ಉಮಾಮಹೇಶ್ವರ, ತ್ರಿಪುರ ಸಂಹಾರ ದೃಶ್ಯ, ಅರ್ಧನಾರೀಶ್ವರ, ದ್ರೌಪದಿ ಕಲ್ಯಾಣ, ಭೂಕೈಲಾಸ, ಅಪ್ಸರೆಯರಾದ ರಂಭಾ, ಊರ್ವಶಿ, ಮೋಹಿನಿ, ಗಿರಿಜೆ ಮೊದಲಾದವರ ಕೇಶಾಲಂಕಾರಗಳು, ಆಭರಣಗಳು, ಅತಿ ಮನೋಜ್ಞವಾಗಿ ಚಿತ್ರಿತವಾಗಿವೆ. ಅರ್ಜುನನ ತಪೋಭಂಗ ದೃಶ್ಯದಲ್ಲಿ ಪಶುಪಕ್ಷಿಗಳು (ಚಿಗರೆ, ಹಂದಿ, ಮೊಲ ಇತ್ಯಾದಿ) ಚಿತ್ರಿತವಾಗಿದೆ."[೧೨]

ಇವುಗಳನ್ನೆಲ್ಲಾ ಗಮನಿಸಿದರೆ ವಿಜಯನಗರದ ಅರಸರು ಸಾಹಿತ್ಯ, ಶಿಲ್ಪಕಲೆ ಮತ್ತು ವಾಸ್ತುಶಿಲ್ಪವನ್ನು ಚೆನ್ನಾಗಿ ಪೋಷಿಸಿದಂತೆ ಚಿತ್ರಕಲೆಯನ್ನು ಬೆಳೆಸಿರಬೇಕು. ರಾಜ್ಯ ಪತನವಾದ ನಂತರ ಕಾಲಾಂತರದಲ್ಲಿ ಇವರ ಚಿತ್ರಕಲೆಯು ಅಳಿಸಿಹೋಗಿರಬೇಕು. ಹಂಪೆಯ ಸುತ್ತಲಿನ ವಿಶಾಲ ಶಿಲಾಭಿತ್ತಿಗಳ (ಕಲ್ಲಿನಗೋಡೆ) ಮೇಲೆ ವರ್ಣಚಿತ್ರಗಳನ್ನು ಬಿಡಿಸಲಾಗಿದ್ದು ರಾಜ್ಯ ಪ್ರಾಚ್ಯವಸ್ತು ಇಲಾಖೆಯ ಸಿಬ್ಬಂದಿ ಇವುಗಳನ್ನು ಪತ್ತೆ ಹಚ್ಚಿದೆ. "ಅಪ್ಪಟ ಜಾನಪದ ಕಲೆಯಾದ ಕಿನ್ನಾಳಕಲೆ ವಿಜಯನಗರ ಕಾಲದಲ್ಲಿ ಹೆಸರುವಾಸಿಯಾಗಿದ್ದಿತು. ಕರಕೌಶಲಕ್ಕೆ ಪ್ರಸಿದ್ಧವಾಗಿರುವ ಈ ಕಲೆ ಕಿನ್ನಾಳದ ಗುಡಿಕಾರರಿಂದ ಅಭಿವೃದ್ಧಿಯಾಗಿತ್ತು. ಹಾಗಾಗಿ ಇದನ್ನು ಕಿನ್ನಾಳಕಲೆ ಎಂದು ಕರೆಯುವುದು ರೂಢಿಗೆ ಬಂದಿತು (ಕಿನ್ನಾಳ ಕೊಪ್ಪಳದಿಂದ ೧೦ ಕಿ.ಮೀ. ದೂರದಲ್ಲಿದೆ). ಕಿನ್ನಾಳದ ಈ ಕಲೆಯಲ್ಲಿ ಗೋಡೆ ಅಲಂಕಾರ, ಫಲಕ, ಪೀಠೋಪಕರಣ ಮೊದಲಾದವುಗಳಲ್ಲಿ ಅತ್ಯಂತ ಮನಮೋಹಕವಾಗಿ ಚಿತ್ರಿಸಲಾಗಿದೆ. ಅಷ್ಟದಿಕ್ಪಾಲಕರ ಗೋಡೆ ಫಲಕ, ಅಷ್ಟಭುಜಾಕೃತಿಯ ಪ್ರಭಾವಳಿ ಸೊಗಸಾಗಿದೆ. ಕಿನ್ನಾಳದ ಗುಡಿಕಾರರು ಕೃಷ್ಣದೇವರಾಯನ ಆಸ್ಥಾನದ ಚಿತ್ರಕಾರರಾಗಿದ್ದರು. ಅರಮನೆಯಲ್ಲಿನ ಅಂತಃಪುರ ಶಯ್ಯಾಗಾರಗಳನ್ನು ಈ ಕಲಾವಿದರು ಶೃಂಗರಿಸುತ್ತಿದ್ದರು."[೧೩]

## ವಿಜಯನಗರ ಕಾಲದ ಸಂಗೀತ ಮತ್ತು ನೃತ್ಯ

ವಿಜಯನಗರ ಸಾಮ್ರಾಜ್ಯದಲ್ಲಿ ಶಿಲ್ಪಕಲೆ, ಚಿತ್ರಕಲೆಯಂತೆ ನೃತ್ಯ ಹಾಗೂ ಸಂಗೀತ ಕಲೆಯೂ ಪ್ರಚಲಿತದಲ್ಲಿದ್ದುದನ್ನು ವಿದೇಶಿ ಯಾತ್ರಿಕರಾದ ಅಬ್ದುಲ್ ರಜಾಕ್, ಡೋಮಿಂಗೊ ಪಯಾಸ್ ಇತರರು ತಮ್ಮ ದಿನಚರಿ ಹಾಗೂ ವರದಿಗಳಲ್ಲಿ ವರ್ಣಿಸಿದ್ದಾರೆ.

"ಹಲವು ವಿಧದ ಆಭರಣಗಳಿಂದ ಅಲಂಕೃತರಾದ ರಾಜನರ್ತಕಿಯರು ಸಭೆಯಲ್ಲಿ ತಮ್ಮ ನಾಟ್ಯ ಪ್ರತಿಭೆಯನ್ನು ತೋರುತ್ತಿದ್ದರು. ಅನೇಕ ನರ್ತಕಿಯರ ಐಶ್ವರ್ಯ ಲೆಕ್ಕಕ್ಕೆ ಸಿಗದಷ್ಟಿದ್ದಿತು. ರಾಜಧಾನಿ ಹಂಪೆಯಲ್ಲಿ ವೇಶ್ಯೆಯರ ಬೀದಿ ಎಂದೇ ಖ್ಯಾತವಾಗಿರುವ ಪ್ರದೇಶವನ್ನು ನೋಡಿದಾಗ ಅಲ್ಲಿಯ ವೇಶ್ಯೆಯರೆಲ್ಲ ಸಂಗೀತ ನೃತ್ಯಗಳಲ್ಲಿ ಪರಿಶ್ರಮವುಳ್ಳವರಾಗಿದ್ದರೆಂದು ಊಹಿಸಬಹುದು. ಆಗ ನೃತ್ಯಶಾಲೆಗಳೂ ಸಹ ಇದ್ದವು. ಅಂದಿನ ನೃತ್ಯ ಕಾರ್ಯಕ್ರಮಗಳನ್ನು ವೀಕ್ಷಿಸಿದ ಪರ್ಶಿಯಾ ಪ್ರವಾಸಿ ಅಬ್ದುಲ್ ರಜಾಕ್ 'ಇಲ್ಲಿನ ನರ್ತಕಿಯರ ಚಾಕಚಕ್ಯತೆ ಚಪಲ ಚಲನೆಗಳನ್ನು ಕಂಡು ತನ್ನ ಕಣ್ಣುಗಳೇ ಸೋತಿವೆ ಎಂದು

ವರ್ಣಿಸಿದ್ದಾನೆ'. ರಾಜಧಾನಿಯಲ್ಲಿ ಹಲವು ಜನ ಸಂಗೀತಗಾರರಿದ್ದು, ವಿದ್ಯಾರಣ್ಯರು ಸಂಗೀತಶಾಸ್ತ್ರಕ್ಕೆ ಸಂಬಂಧಿಸಿದ 'ಸಂಗೀತಸಾರ' ಎಂಬ ಗ್ರಂಥವನ್ನು ಸಹ ರಚಿಸಿದರು."೧೪

ಈ ರೀತಿ ವಿಜಯನಗರದ ಅರಸರು ಸಂಗೀತ, ಶಿಲ್ಪ, ನಾಟ್ಯಕಲೆಯನ್ನು ಬೆಳೆಸಿಕೊಂಡು ಬಂದರು. ವಿದೇಶಿ ಯಾತ್ರಿಕರು ಕಂಡಂತೆ ಇದು ಅತ್ಯಂತ ವೈಭವದ ರಾಜ್ಯವಾಗಿತ್ತು.

ವಿಜಯನಗರದ ಅರಸರು ಕೇವಲ ರಾಜಕೀಯಕ್ಕಷ್ಟೇ ತಮ್ಮ ಜೀವನವನ್ನು ಮುಡಿಪಾಗಿಡಲಿಲ್ಲ. ಕಲೆ, ಕ್ರೀಡೆ, ಸೌಧಗಳ ನಿರ್ಮಾಣ, ದೇವಾಲಯಗಳ ನಿರ್ಮಾಣ, ಕೆರೆಗಳ ರಚನೆ ಮುಂತಾದವುಗಳ ಕಡೆಗೂ ಗಮನಹರಿಸಿದರು. ನೀರಾವರಿಗಂತೂ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದರು ಹಾಗೂ ಕಲ್ಲಿನಲ್ಲಿ ದೇವಾಲಯಗಳನ್ನು ರಚಿಸಿ ಗಾರೆಯಿಂದ ಗೋಪುರ ರಚನೆಯನ್ನು ಮಾಡುತ್ತಿದ್ದರು.

ಸುಂದರವಾದ ನಗರ ನಿರ್ಮಾಣದಲ್ಲಿ ಈ ರಾಜರಿಗೆ ತುಂಬ ಆಸಕ್ತಿಯಿತ್ತು. ಕೋಟೆ ರಚನೆಯಲ್ಲಿ ಪೋರ್ಚುಗೀಸರ ಸಹಾಯವನ್ನು ಪಡೆದಿರುವರೆಂದು ವಿದೇಶಿಯಾತ್ರಿಕರು ತಿಳಿಸಿದ್ದಾರೆ. ನಗರದ ಜನತೆ ಶಾಂತಿಯುತವಾಗಿ ಜೀವನ ನಡೆಸುತ್ತಿದ್ದು, ಒಂದೆರಡು ಬಾರಿ ಹಂಪೆಗೆ ಮುಸ್ಲಿಂ ಅರಸರು ಧಾಳಿ ಮಾಡಿರುವುದನ್ನು ಬಿಟ್ಟರೆ, ಹಂಪೆಯು ಅಪಾಯರಹಿತವಾದ ರಾಜಧಾನಿಯಾಗಿತ್ತು.

ವಿಜಯನಗರ ಸಾಮ್ರಾಜ್ಯದ ದೊರೆಗಳಾದ ಬುಕ್ಕರಾಯ, ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವರಾಯ ಮುಂತಾದವರು. ಸಂಗೀತ ಮತ್ತು ನೃತ್ಯಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟಂತಹ ನಿದರ್ಶನಗಳನ್ನು ಈ ಕಾಲದ ಶಾಸನಗಳು ವಿವರವಾಗಿ ತಿಳಿಸುತ್ತವೆ. ಇವುಗಳಿಂದ ರಾಜರು ಕಲೆಗಳು ಮತ್ತು ಕಲಾವಿದರಿಗೆ ಕೊಡುತ್ತಿದ್ದಂತಹ ಗೌರವ ಕೊಡುಗೆಗಳ ಬಗ್ಗೆ ಹಾಗೂ ದೇವಸ್ಥಾನಗಳಲ್ಲಿ ವಿವಿಧ ಪೂಜೆಗಳ ಪೂಜಾವಿಧಿಗಳಲ್ಲಿ ಸಂಗೀತ ಮತ್ತು ನೃತ್ಯಗಾರ್ತಿಯರ ಸೇವೆಗಳ ವಿವರಗಳು ದೊರಕುತ್ತವೆ. ವಿವಿಧ ವಾದ್ಯಗಳಾದ ತಬಲ, ನಗಾರಿ, ಸೀತಾರ, ಕಂಸಾಳೆ, ಡೋಲು, ಜಾಗಟೆ, ಶಂಖ, ನಾಗಸ್ವರ ವಾದ್ಯಗಳ ಉಪಯೋಗವನ್ನು ಮಾಡುತ್ತಿದ್ದರು.

ಗ್ರಾಮಾಂತರ ಕಲೆಗಳಾದ ಜಾನಪದ ತಾಳಮದ್ದಳೆ (ಯಕ್ಷಗಾನ) ಸಂಗೀತ ಮೇಳಗಳನ್ನು ನಡೆಸುತ್ತಿದ್ದ ಬಗ್ಗೆ ಶಾಸನಗಳಿಂದ ತಿಳಿದು ಬರುವುದು.

ಒಟ್ಟಾರೆ, ಅತ್ಯಂತ ಸುಸಂಸ್ಕೃತವಾದ ಕಲೆಗಳ ಬೀಡು ಎನಿಸಿಕೊಂಡಿರುವ ಒಂದು ಭವ್ಯ ಸಾಮ್ರಾಜ್ಯ ಇಂದು ನೆಲಸಮವಾಗಿದೆ. ಹುಡಿಗೊಂಡ ಹಂಪೆಯ ಸ್ಮಾರಕಗಳನ್ನು ಚೆನ್ನಾಗಿ ರಕ್ಷಿಸುವುದು ನಾಡಿನ ಜನರ ಕರ್ತವ್ಯವಾಗಿದೆ.

## ಕೊನೆ ಟಿಪ್ಪಣಿಗಳು

೧. ಸದಾನಂದ ಕನವಳ್ಳಿ : *ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ*, ಪು. ೨.

೨. ಶ್ರೀನಿವಾಸಾಚಾರ್ ಎಸ್., : *ಹಂಪಿ ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ರಾಜಧಾನಿ*, ಪು. ೨೫.

೩. ಅದೇ.... ಪು. ೨೬.

೪. ಸದಾನಂದ ಕನವಳ್ಳಿ : *ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ*, ಪು. ೨೫೩.

೫. ಅದೇ....

೬. ಗಳಗನಾಥ : *ಕನ್ನಡಿಗರ ಕರ್ಮಕತೆ*, ಸಂ.೨, ಪು. ೬.

೭. ಬಾಲಸುಬ್ರಹ್ಮಣ್ಯ : *ಮರೆಯಲಾಗದ ಮಹಾಸಾಮ್ರಾಜ್ಯ*, ಪು. ೨೦.

೮. ಶ್ರೀನಿವಾಸಾಚಾರ್ ಎಸ್., : *ಹಂಪಿ ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ರಾಜಧಾನಿ*, ಪು. ೨೩.

೯. ಸದಾನಂದ ಕನವಳ್ಳಿ : *ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ*, ಪು. ೩೯೫.

೧೦. ಶ್ರೀನಿವಾಸಾಚಾರ್ ಎಸ್., : *ಹಂಪಿ ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ರಾಜಧಾನಿ*, ಪು. ೩೧.

೧೧. ಅದೇ... ಪು. ೩೧.

೧೨. ಫಾಲಾಕ್ಷ : *ಸಮಗ್ರ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ*, ಪು. ೧೩೦.

೧೩. ಅದೇ... ಪು. ೧೩೧.

೧೪. ಅದೇ... ಪು. ೧೩೧.

* * * *

## ಅಧ್ಯಾಯ ೫

# ಉಪಸಂಹಾರ

**ಪ್ರ**ಸ್ತುತ ಪ್ರಬಂಧದಲ್ಲಿ ಚರ್ಚಿಸಿದ ವಿಷಯಗಳ ಹಿನ್ನೆಲೆಯಲ್ಲಿ ಒಟ್ಟಾರೆಯಾಗಿ ಕಂಡುಕೊಂಡ ವಿಚಾರಗಳನ್ನು ಇಲ್ಲಿ ವಿವರಿಸಬಹುದು.

ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ರೂಪುಗೊಂಡ ಪಾರಂಪರಿಕ ಭಾಷಾಂತರ ಪ್ರಕ್ರಿಯೆಗೂ ೧೮ನೆಯ ಶತಮಾನದ ಕೊನೆಯ ಹಾಗೂ ೧೯ನೆಯ ಶತಮಾನಗಳ ಪೂರ್ವಾರ್ಧದಲ್ಲಿ ಆದ ಅನುವಾದ ಪ್ರಕ್ರಿಯೆಗೂ ಸ್ಪಷ್ಟವಾದ ವ್ಯತ್ಯಾಸವಿದೆ. ಭಾಷಾಂತರ ಎನ್ನುವ ಪ್ರಕ್ರಿಯೆ ಒಂದು ಭಾಷೆಯ ಕೃತಿಯನ್ನು ಇನ್ನೊಂದು ಭಾಷೆಯಲ್ಲಿ ಕೊಡುವುದು ಎಂದಷ್ಟೇ ಆಗಿತ್ತು. ಆದರೆ ಇಂದು ಭಾಷಾಂತರ ಎನ್ನುವುದು ಅಂಗ್ಲ ಭಾಷೆಯ ಅಥವಾ ಇನ್ನಿತರ ಯಾವುದೇ ಭಾಷೆಯ ಕೃತಿಯನ್ನು ಆಯಾ ಪ್ರಕಾರ ಸಹಿತವಾಗಿ ಇನ್ನೊಂದು ಭಾಷೆಯಲ್ಲಿ ಪುರೂಪಿಸುವ ಗಂಭೀರ ಕ್ರಿಯೆಯೂ ಹೌದು ಎಂಬುದು ಈ ಅವಧಿಯಲ್ಲಿ ಸ್ಪಷ್ಟವಾಗಿದೆ. ಆ ಕಾರಣವೇ ಯಥಾನುವತ್ತಾದ ಅನುವಾದದ ಪ್ರಕ್ರಿಯೆಗೆ ಈ ಅವಧಿಯಲ್ಲಿ ನಾಂದಿ ಹಾಡಲಾಯಿತು.

ಒಂದು ಭಾಷೆಯ ಕೃತಿಯನ್ನು ಇನ್ನೊಂದು ಭಾಷೆಯಲ್ಲಿ ಕೊಡುವಾಗ ಮೂಲ ಕೃತಿಗಿಂತ ಮಿಗಿಲೆನಿಸಿದಂತೆ ಕೃತಿ ರಚನೆ ಮಾಡುವ ಉದ್ದೇಶ ನಮ್ಮ ಪ್ರಾಚೀನ ಕವಿಗಳಲ್ಲಿತ್ತು. ಆದರೆ ಈ ಅವಧಿಯ ಕೃತಿಗಳಲ್ಲಿ ಇನ್ನೊಂದು ಭಾಷೆಯ ಜೊತೆಗೆ ಆ ಕೃತಿಯ ಆಶಯವನ್ನು ನಮ್ಮ ಓದುಗರಿಗೆ ಯಥಾವತ್ತಾದ ರೀತಿಯಲ್ಲಿ ತಲುಪಿಸಬೇಕೆಂಬ ಕಾಳಜಿ ಅನುವಾದದ ಹಿಂದಿದೆ ಎಂಬುದು ಸ್ಪಷ್ಟವಾಗುತ್ತದೆ. ಈ ಮೂಲಕ ವಿಶ್ವ ಪ್ರಕ್ರಿಯೆಯ ಆಗುಹೋಗುಗಳ ಸ್ವರೂಪವನ್ನು ಅರಿಯುವುದಕ್ಕೆ ಪ್ರೇರೇಪಣೆ ನೀಡಿತು. ವಿಶ್ವದೊಂದಿಗೆ ತಾನೂ ಮುನ್ನಡೆಯುವಲ್ಲಿ ಸಾಂಸ್ಕೃತಿಕ ದಿಕ್ಕು ದೆಸೆಗಳು ಇದರಿಂದ ಸಾಧ್ಯವಾದವು.

ಇಲ್ಲಿಯವರೆಗೆ ವಿಜಯನಗರವನ್ನು ಕುರಿತು ಹಲವಾರು ವಿವರಗಳನ್ನು ಕೊಡುವ ಸಂಶೋಧನ ಕೃತಿಗಳು ಹಾಗೂ ಹಲವಾರು ಪುಸ್ತಕಗಳು ಪ್ರಕಟಗೊಂಡಿವೆ. ಇವೆಲ್ಲಾ ಇತಿಹಾಸಕ್ಕೆ ಸಂಬಂಧಿಸಿದ ಕೃತಿಗಳು. ಆದರೆ ಭಾಷಾಂತರ ಕೃತಿಗಳನ್ನು ಇಟ್ಟುಕೊಂಡು ಸಾಂಸ್ಕೃತಿಕ ಸಾಮ್ರಾಜ್ಯ ವಿಜಯನಗರವನ್ನು ಕುರಿತಂತೆ

ಹೆಚ್ಚು ಅಧ್ಯಯನಗಳು ಆಗಿರಲಿಲ್ಲ. ಈ ದೆಸೆಯಿಂದ ಭಾಷಾಂತರ ಕೃತಿಗಳಲ್ಲಿ ಚಿತ್ರಿತವಾಗಿರುವ ವಿಜಯನಗರದ ಸಾಂಸ್ಕೃತಿಕ ವಿವರಗಳನ್ನು ಇಟ್ಟುಕೊಂಡು ಅಧ್ಯಯನಕ್ಕೆ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ವಿಜಯನಗರ ಸಾಮ್ರಾಜ್ಯದ ನಿರ್ಮಾಣದಿಂದ ಹಿಡಿದು ವಿನಾಶದವರೆಗಿನ ಸಾಂಸ್ಕೃತಿಕ ವಿಚಾರಗಳನ್ನು ಭಾಷಾಂತರ ಕೃತಿಗಳ ಮೂಲಕ ನಿರೂಪಿಸಲಾಗಿದೆ. ಹಂಪಿಯು ಮೊದಲು ವಿಜಯನಗರದ ಅರಸರ ರಾಜಧಾನಿಯಾಗಿ ಮೆರೆದು ಈಗ ಗತಕಾಲದ ಐತಿಹಾಸಿಕ ಪ್ರವಾಸಿ ತಾಣವಾಗಿ ಹಾಗೂ ಪಂಪಾ ವಿರೂಪಾಕ್ಷನ ಪುಣ್ಯಕ್ಷೇತ್ರವಾಗಿಯೂ ರೂಪುಗೊಂಡಿದೆ.

ಯಾವ ಕಡೆಗೆ ದೃಷ್ಟಿ ಬೀರಿದರೂ ಕಲಾತ್ಮಕತೆಯ ಕಮನೀಯತೆಯನ್ನು ಮೈಗೂಡಿಸಿಕೊಂಡು ಗಮನ ಸೆಳೆವ ರಾಶಿ ರಾಶಿ ಕಲ್ಲು ಬಂಡೆಗಳದೇ ಇಲ್ಲಿ ದರ್ಬಾರು. ಬಹುಶಃ ಯಾವಾಗಲೋ ಇಲ್ಲಿ ಕಲ್ಲು ಬಂಡೆಗಳ ಮಳೆ ಬಿದ್ದಿದೆಯೋ ಇಲ್ಲವೇ ಭೂದೇವಿ ತನ್ನೊಡಲ ಭಾರವನ್ನು ಕಳೆದುಕೊಳ್ಳಲು ಬಾಯ್ದೆರೆದು ಕಲ್ಲು ಬಂಡೆಗಳನ್ನು ಉಗುಳಿ ತಣ್ಣಗಾಗಿರಬೇಕು ಎಂಬಂತಿದೆ ಇಲ್ಲಿನ ದೃಶ್ಯ. ಇಲ್ಲಿ ಯಾತ್ರಾರ್ಥಿಗಳು ಕುತೂಹಲಿಗಳಾಗಿ ಸುತ್ತಾಡಲು ಹೊರಟರೆ ಹೆಜ್ಜೆ ಹೆಜ್ಜೆಗೂ ಗತಕಾಲದ ವೈಭವದ ಘಟನೆಗಳು ಕಣ್ಮುಂದೆ ಸುಳಿದು ಭೂತಕಾಲಕ್ಕೆ ಕರೆದೊಯ್ಯುತ್ತವೆ. ಕಕ್ಕುಲತೆಯಿಂದ ಕಿವಿಗೊಟ್ಟು ಆಲಿಸುವವರಿಗೆ ಒಂದೊಂದು ಕಲ್ಲು ಬಂಡೆಯೂ ಸಹ ಅಂದಿನ ಜೀವಂತ ಕಥೆಯನ್ನು ಪಿಸುಗುಡುತ್ತದೆಯೋ ಎಂಬ ಭಾವನೆ ಮೂಡುವಷ್ಟು ಅದ್ಭುತ ರಮ್ಯವಾಗಿವೆ ಇಲ್ಲಿನ ದೃಶ್ಯಾವಳಿಗಳು.

ಹಲವರು ಭಾವಿಸಿದಂತೆ ಹಂಪೆ ಕಲ್ಲು ಬಂಡೆಗಳ ಕೊಂಪೆಯಲ್ಲ. ವಿಜಯನಗರ ಸಾಮ್ರಾಜ್ಯದ ವೈಭವದ ಕಾಲಕ್ಕೆ ಮುತ್ತು, ರತ್ನಗಳನ್ನು ಹಾದಿ ಬೀದಿಗಳಲ್ಲಿ ಕಡಲೆಪುರಿಗಳಂತೆ ರಾಶಿ ಹಾಕಿ ಅಳೆದು ಸುರಿದು ಮಾರಾಟ ಮಾಡಿದ ಶ್ರೀಮಂತನಾಡು. ಕಲೆ, ಸಾಹಿತ್ಯ, ಸಂಗೀತಗಳನ್ನು ಪೋಷಿಸಿ ಸಂಸ್ಕೃತಿಯ ವೈಭವಕ್ಕೆ ಪ್ರೋತ್ಸಾಹಿಸಿದ ಹೃದಯ ಶ್ರೀಮಂತರ ಬೀಡು. ಕಲ್ಲು ಬಂಡೆಗಳಿಂದ ಆವೃತವಾಗಿರುವ ಕಾಡಿನ ನಡುವೆ ಒಂದಾನೊಂದು ಕಾಲದಲ್ಲಿ ವಿಶ್ವವಿಖ್ಯಾತವಾದ ಒಂದು ಸಾಮ್ರಾಜ್ಯ ಇತ್ತೆಂಬುದನ್ನು ಕಲ್ಪಿಸಿಕೊಳ್ಳಲು ಕಣ್ಮನಗಳು ದಣಿದರೆ, ಹೃದಯ ಮಾತ್ರ ಅಂದಿನ ವೈಭವಕ್ಕೆ ಹೆಮ್ಮೆಯಿಂದ ಮಣಿಯುತ್ತದೆ.

ಬಿಸಿಲಿನ ಬಳ್ಳಾರಿ ಜಿಲ್ಲೆಯ ಬಣಗುಡುವ ಬೆಟ್ಟ-ಗುಡ್ಡಗಳ ಸಾಲುಗಳ ಈ ಪ್ರದೇಶದ ಸುತ್ತಲೂ ತುಂಗಭದ್ರೆಯರು ಒಟ್ಟಾಗೆ ತಣ್ಣಗೆ ಹರಿಯುತ್ತಿದ್ದರೂ ಅಡಿಗಡಿಗೆ ಬೆವರು ಬಸಿವಂತಹ ಬಿಸಿಲು. ಸಾಕಪ್ಪಾ ಸಾಕು ಈ ಸ್ಥಳದ ಸಹವಾಸ ಎಂದು ಎನ್ನಿಸದಿರದು. ಆದರೆ ಇಂತಹ ಪ್ರದೇಶದಲ್ಲಿ ಸಂಗಮ ವಂಶಸ್ಥ ಸೋದರರಾದ ಹಕ್ಕಬುಕ್ಕರು ಕ್ರಿ.ಶ. ೧೩೩೬ರಲ್ಲಿ ವಿಜಯನಗರವೆಂಬ ಸಾಮ್ರಾಜ್ಯವನ್ನು ಸ್ಥಾಪಿಸಿ ಹಂಪಿಯನ್ನು ಅದರ ರಾಜಧಾನಿಯನ್ನಾಗಿ ಮಾಡಿಕೊಂಡರು. ಹರಿಹರ ಮತ್ತು ಇಮ್ಮಡಿ ದೇವರಾಯನ ಕಾಲಕ್ಕೆ ಅದು ನಾಲ್ಕು ದಿಕ್ಕುಗಳಲ್ಲಿಯೂ ವಿಸ್ತರಿಸಿತು. ಈ ಸಾಮ್ರಾಜ್ಯಕ್ಕೆ ಭೇಟಿ ನೀಡಿದ ಹಲವಾರು ಯಾತ್ರಿಕರಲ್ಲಿ

ಪ್ರಮುಖನಾದ ಅಬ್ದುಲ್ ರಜಾಕ್‌ನು ಇಲ್ಲಿಯ ವೈಭವವನ್ನು ಕಂಡು ಬೆಕ್ಕಸ ಬೆರಗಾಗಿ ಪ್ರಪಂಚದಲ್ಲಿರುವ ಬೇರಾವ ರಾಜ್ಯವೂ ಈ ರಾಜ್ಯಕ್ಕೆ ಸಮವಾಗಲಾರದೆಂದು ಉದ್ಗರಿಸಿದನಂತೆ. ದಕ್ಷ ಆಡಳಿತಗಾರನು ಸಮರ್ಥ ಸೇನಾನಿಯು ಆದ ಕೃಷ್ಣದೇವರಾಯನು ಅಧಿಕಾರಕ್ಕೆ ಬಂದು ರಾಜ್ಯದ ಗಡಿಯನ್ನು ಮತ್ತಷ್ಟು ವಿಸ್ತರಿಸುವುದರ ಜೊತೆಗೆ ಧಾರ್ಮಿಕವಾಗಿ, ರಾಜಕೀಯವಾಗಿ, ಸಾಹಿತ್ಯಿಕವಾಗಿ, ಭಾಷಿಕವಾಗಿ, ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಗಂಭೀರ ಆಯಾಮ ನೀಡಿದನು. ಇವನ ಕಾಲಕ್ಕೆ ಸಾಹಿತ್ಯ, ಸಂಗೀತ, ಕಲೆ ಮತ್ತು ವಾಸ್ತುಶಿಲ್ಪಕ್ಕೆ ವಿಶೇಷ ಪ್ರೋತ್ಸಾಹ ದೊರೆಯಿತು. ಆದ್ದರಿಂದಲೇ ಕೃಷ್ಣದೇವರಾಯನ ಆಸ್ಥಾನಕ್ಕೆ ಭೇಟಿ ನೀಡಿದ ಡೊಮಿಂಗೊ ಪಯಾಸ್ ಎಂಬ ಯಾತ್ರಿಕ ಕೃಷ್ಣದೇವರಾಯನ ಕಾಲವನ್ನು ಸಕಲ ಸುಖ ಸಮೃದ್ಧಿಯ ಕಾಲವೆಂದು ಬಣ್ಣಿಸಿದ್ದಾನೆ.

ಕ್ರಿ.ಶ. ೧೫-೧೬ನೆಯ ಶತಮಾನದಲ್ಲಿ ಇಲ್ಲಿಗೆ ಬಂದಿದ್ದ ವಿದೇಶಿ ಪ್ರವಾಸಿಗರು ವಿಜಯನಗರವು ಪ್ರಖ್ಯಾತ ಪುರಾತನ ನಗರ 'ರೋಮ್'ಗಿಂತ ದೊಡ್ಡದಾಗಿತ್ತೆಂದು ಕೊಂಡಾಡಿದ್ದಾರೆ. ಆದರೆ ಮುಂದೆ ಕ್ರಿ.ಶ. ೧೫೬೫ರಲ್ಲಿ ತಾಳಿಕೋಟೆಯಲ್ಲಿ ನಡೆದ ಯುದ್ಧದಲ್ಲಿ ಬಲಿಷ್ಠ ಮತ್ತು ಶ್ರೇಷ್ಠವಾದ ವಿಜಯನಗರ ಸಾಮ್ರಾಜ್ಯವು ಸುಲ್ತಾನರ ವಶವಾಯಿತು. ಸಂಪತ್ತನ್ನೆಲ್ಲಾ ಲೂಟಿ ಮಾಡಿದ ಆಕ್ರಮಣಕಾರರು ಅಷ್ಟಕ್ಕೆ ತೃಪ್ತರಾಗದೆ ವಿರೂಪಾಕ್ಷ ದೇವಾಲಯವೊಂದನ್ನು ಹೊರತುಪಡಿಸಿ ಸತತವಾಗಿ ಆರು ತಿಂಗಳ ಕಾಲ ಲೂಟಿ, ದೊಂಬಿಯ ಕಾರ್ಯಾಚರಣೆ ನಡೆಸಿ ಹಂಪಿಯನ್ನು ಸಂಪೂರ್ಣವಾಗಿ ಹಾಳುಗೆಡುವುವವರೆಗೂ ವಿರಮಿಸಲಿಲ್ಲ.

ಆರು ತಿಂಗಳ ಕಾಲ ಅವರು ಹಂಪೆಯನ್ನು ಧ್ವಂಸಗೊಳಿಸಿದರೆಂದರೆ ಆ ನಾಡು ಎಷ್ಟು ವಿಸ್ತಾರ ಮತ್ತು ಶ್ರೀಮಂತಿಕೆಯಿಂದ ಕೂಡಿತ್ತು ಹಾಗೂ ಧಾಳಿಕೋರರು ಎಂತಹ ಕ್ರೂರಿಗಳೂ ಮತಾಂಧರೂ ಎಂಬುದು ಎಂಥವರಿಗಾದರೂ ವೇದ್ಯವಾಗಿ ಹೃದಯ ಹಿಂಡಿದ ಅನುಭವವಾಗದಿರದು. ಅಂದಿನಿಂದ ಹಂಪೆ (ವಿಜಯನಗರ ಸಾಮ್ರಾಜ್ಯ) ರುದ್ರಭೂಮಿಯಂತೆ ಹಾಳು ಕೊಂಪೆಯಾಗಿಬಿಟ್ಟಿದೆ. ಈಗ ಕಾಣುವ ಅವಶೇಷ ಸುಮಾರು ೨೦ ಕಿ.ಮೀ. ವ್ಯಾಪಿಸಿದ್ದರೆ ಅವಸಾನಕ್ಕೂ ಮುನ್ನ ಇದರ ವ್ಯಾಪ್ತಿ ೫೦ ಕಿ.ಮೀ.ಗಳಷ್ಟು ವಿಸ್ತಾರವಾಗಿತ್ತೆಂದು ತಿಳಿದು ಬರುವುದು. ಇದನ್ನು ಪುನರುತ್ಥಾನಗೊಳಿಸುವ ಇಚ್ಛಾಶಕ್ತಿ ಮತ್ತು ಆಸಕ್ತಿ ಯಾರಿಂದಲೂ ವ್ಯಕ್ತವಾಗದ ಕಾರಣ ಎಲ್ಲರ ನಿರ್ಲಕ್ಷ್ಯಕ್ಕೊಳಗಾಗಿ ಭೂಗರ್ಭ ಸೇರುವುದರಲ್ಲಿತ್ತು. ಆದರೆ ಭಾರತದ ಬ್ರಿಟಿಷ್ ಆಡಳಿತಾಧಿಕಾರಿಯಾಗಿದ್ದ ರಾಬರ್ಟ್ ಸಿವೆಲ್‌ರ ಕಳಕಳಿ ಈ ಸಾಮ್ರಾಜ್ಯದ ಗತವೈಭವದ ಮೇಲೆ ಬೆಳಕು ಚೆಲ್ಲಿದುದರ ಪರಿಣಾಮವಾಗಿ ಹಾಗೂ ಇದರ ಬಗ್ಗೆ ವಿಶೇಷ ಆಸಕ್ತಿಯನ್ನು ತಳೆದ ಬ್ರಿಟಿಷ್ ವಾಸ್ತು ವಿಜ್ಞಾನಿಗಳು ಇತಿಹಾಸಜ್ಞರ ವಿಶ್ವಸಮ್ಮೇಳನದಲ್ಲಿ ಗಮನ ಸೆಳೆದುದರ ಫಲವಾಗಿ ಗಿಡ, ಮರ, ಮುಳ್ಳು ಪೊದೆ ಮತ್ತು ಮಣ್ಣಿನಿಂದ ಆವೃತವಾಗಿ ಕಾಡು ಮೃಗಗಳ ಬೀಡಾಗಿ ನಿರ್ಜನ ಪ್ರದೇಶವಾಗಿದ್ದ ಹಂಪೆ ಮತ್ತು ಅಲ್ಲಿನ ಅವಶೇಷಗಳು ಉತ್ಖನನದಿಂದ ಅಭಿವೃದ್ಧಿಗೊಂಡು ಇಂದು ವಿಶ್ವಪರಂಪರೆಯ ಸ್ಮಾರಕಗಳ ಸಾಲಿಗೆ ಸೇರಿಕೊಳ್ಳುವುದಕ್ಕೆ ಸಾಧ್ಯವಾಯಿತು.

ಇದರಿಂದಾಗಿ ಮಧ್ಯಕಾಲೀನ ಭಾರತದಲ್ಲಿ ಕರ್ನಾಟಕದ ಇತಿಹಾಸ, ಸಂಸ್ಕೃತಿ, ವಿಜ್ಞಾನ ಹಾಗೂ ಶಿಲ್ಪಕಲೆಯನ್ನು ಅಭ್ಯಾಸ ನಡೆಸುವ ಅಥವಾ ಸಂಶೋಧನೆ ಮಾಡುವವರಿಗೆ ಹಂಪೆ ಒಂದು ಯೋಗ್ಯ ಸ್ಥಳವಾಗಿದೆ. ಇದನ್ನು ವಿಶ್ವದ ಅತ್ಯಂತ ದೊಡ್ಡ 'ಬಯಲ ಪ್ರದರ್ಶನಾಲಯ'ವೆಂತಲೂ ಕರೆದಿರುವುದು ವಿಶೇಷವಾಗಿದೆ.

ಹಂಪೆಯನ್ನು ಅವರವರ ಆಸಕ್ತಿ ಹಾಗೂ ಅಭಿರುಚಿಗೆ ಅನುಗುಣವಾಗಿ ಒಂದು ದಿನದಿಂದ ಹಿಡಿದು ಮೂರು ತಿಂಗಳುಗಳವರೆಗೆ ವೀಕ್ಷಿಸಬಹುದಾಗಿದೆ. ಇಲ್ಲಿಯ ಎಲ್ಲಾ ಸ್ಮಾರಕಗಳಿಗೂ ವಾಹನದ ರಸ್ತೆ ಹಾಗೂ ಕಾಲುಹಾದಿಗಳೆರಡೂ ಇವೆ. 'ಕಣ್ಣಿದ್ದರೆ ಕನಕಗಿರಿ ನೋಡು, ಕಾಲಿದ್ದರೆ ಹಂಪಿ ನೋಡು' ಎಂಬುದು ಇಲ್ಲಿಯ ಸ್ಥಳೀಯರು ನಿತ್ಯ ಬಳಸುವ ಗಾದೆ ಮಾತು.

ಪ್ರಸ್ತುತ ಈ ಪ್ರಬಂಧ ಮುಖೇನ ಭಾಷಾಂತರ ಮಾಡುವಾಗಿನ ಸಮಕಾಲೀನ ಅಗತ್ಯ, ಕನ್ನಡ ಸಮಕಾಲೀನ ಸಾಂಸ್ಕೃತಿಕ ಪರಿಸರ ಇವುಗಳ ನೆಲೆಯಿಂದ ಭಾಷಾಂತರ ಕೃತಿಗಳ ಸಾಂಸ್ಕೃತಿಕ ಆಶಯವನ್ನು ಕಂಡರಿಸುವ ಉದ್ದೇಶವನ್ನು ಹೊಂದಲಾಗಿದೆ. ೨ನೇ ಆಧ್ಯಾಯದಲ್ಲಿ ಹಂಪಿ ಅಂದಿಗಿಂತಲೂ ಇಂದು ಹೇಗೆ ವಿಭಿನ್ನವಾಗಿದೆ ಎಂಬುದನ್ನು ವಿವರಿಸಲಾಗಿದೆ. ಸುಸಂಸ್ಕೃತ ಚರಿತ್ರೆಯನ್ನು ಹೊಂದಿದ ಹಂಪೆಯು ಇಂದು ದುಷ್ಟಟಗಳ ಆಡುಂಬೊಲದ ತಾಣವಾಗಿದ್ದು ಅದಕ್ಕೆ ಕೇವಲ ವಿದೇಶಿಯರಷ್ಟೇ ಹೊಣೆಗಾರರಾಗಿಲ್ಲ. ಹಂಪಿಯು ಇಂದು ಕಲುಷಿತವಾಗಲು ಸ್ಥಳೀಯರ ಪಾಲೂ ಸಹ ಇದೆ. ಇದು ಹೀಗೆ ಕಲುಷಿತ ತಾಣವಾಗಿಯೇ ಮುಂದುವರಿದರೆ ಇಲ್ಲಿಯ ಸಾಂಸ್ಕೃತಿಕ ಪರಂಪರೆಯೇ ಕಣ್ಮರೆಯಾಗುವ ಸಾಧ್ಯತೆಗಳಿವೆ ಎಂದು ಪ್ರವಾಸೋದ್ಯಮ ಅಧ್ಯಯನದಲ್ಲಿ ವರದಿ ಮಾಡಲಾಗಿದೆ. ಈ ಎಲ್ಲಾ ನೆಲೆಗಳಿಂದ ಕರ್ನಾಟಕದ ವೈಭವೋಪೇತ ಸಾಂಸ್ಕೃತಿಕ ಚರಿತ್ರೆಯು ಅಂದಿನಿಂದ ಇಂದಿನವರೆಗೆ ಹೇಗೆ ಪ್ರರೂಪಿತವಾಗಿದೆ ಎಂಬುದನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ.

ಈ ಪ್ರಬಂಧದ ಮೂರನೇ ಅಧ್ಯಾಯದಲ್ಲಿ ವಿಜಯನಗರ ಕಾಲದ ಸಾಂಸ್ಕೃತಿಕ ಸ್ವರೂಪವನ್ನು ಕುರಿತು ವಿವರಿಸಲಾಗಿದೆ. ಭಾಷಿಕವಾಗಿ ವಿಜಯನಗರ ಸಾಮ್ರಾಜ್ಯದ ಅರಸರು ಕನ್ನಡಿಗರೋ ಅಥವಾ ತೆಲುಗರೋ ಎಂಬುದನ್ನು ಚರ್ಚಿಸುವುದರ ಜೊತೆಗೆ ಹಲವಾರು ಭಾಷೆಗಳಿಗೆ ಇಲ್ಲಿ ಪ್ರೋತ್ಸಾಹವಿದ್ದು ಬಹು ಭಾಷಾ ಮತ್ತು ಬಹು ಸಂಸ್ಕೃತಿಯ ನಾಡಾಗಿತ್ತು ಎನ್ನುವುದನ್ನು ವಿವರಿಸಲಾಗಿದೆ.

ವಿಜಯನಗರ ಕಾಲದ ಸಾಹಿತ್ಯವನ್ನು ಕುರಿತು ಕೇವಲ ಕೆಲವೇ ಪದಗಳಲ್ಲಿ ವಿವರಿಸುವುದು ತೀರಾ ಅಸಾಧ್ಯವಾದ ಕಾರ್ಯ. ಈ ಸಾಮ್ರಾಜ್ಯದಲ್ಲಿ ಕವಿಗಳು ಹಾಗೂ ಪಂಡಿತರ ಮಹಾಪೂರವೇ ಸೇರಿತ್ತು. ಕೃಷ್ಣದೇವರಾಯನ ಆಸ್ಥಾನದಲ್ಲಿ ಅಷ್ಟದಿಗ್ಗಜರು ಎಂಬುದಾಗಿ ಹೆಸರಾಂಕಿತರಾಗಿದ್ದ ವಿದ್ವಾಂಸರಿದ್ದರು. ಸ್ವತಃ ರಾಜನೂ ಕವಿಯಾಗಿದ್ದು, ಹಲವು ಕೃತಿಗಳನ್ನು ರಚಿಸಿದ ಬಗೆಗೆ ವಿವರಿಸಲಾಗಿದೆ. ಹಲವು ಸಾಹಿತ್ಯ

ಪ್ರಕಾರಗಳು ಇಲ್ಲಿಯೇ ಸೃಷ್ಟಿಯಾಗಿರುವುದನ್ನು ಗಮನಿಸಿದರೆ ವಿಜಯನಗರವು ಸಾಹಿತ್ಯ, ಕಲೆಗಳಿಗೆಲ್ಲ ತವರು ಮನೆಯಾಗಿತ್ತೆಂಬುದನ್ನು ತಿಳಿಯಬಹುದು.

ಇದೇ ಅಧ್ಯಾಯದಲ್ಲಿ ಈ ಸಾಮ್ರಾಜ್ಯದ ರಾಜಕೀಯವನ್ನು ಕುರಿತು ಚರ್ಚಿಸಲಾಗಿದೆ. ವಿಜಯನಗರವನ್ನಾಳಿದ ಸಂಗಮ, ಸಾಳುವ, ತುಳುವ ಮತ್ತು ಅರವೀಡು ವಂಶಗಳಲ್ಲಿ ಸಂಗಮ ವಂಶಜರಿಂದ ಸ್ಥಾಪನೆಯಾದ ಸಾಮ್ರಾಜ್ಯವು ಸಾಳ್ವ ಮತ್ತು ತುಳುವ ಸಾಮ್ರಾಜ್ಯದ ವೇಳೆಗೆ ಉನ್ನತ ಸ್ಥಾನವನ್ನು ಪಡೆದಿತ್ತು. ಅರವೀಡು ಸಂತತಿಯ ಕಾಲಕ್ಕೆ ಅದು ಪತನ ಹೊಂದಿತೆಂಬ ವಿಷಯವು ತಿಳಿದು ಬರುವುದು. ವಿಜಯನಗರದ ಅರಸರು ತಮ್ಮ ಆಡಳಿತಾವಧಿಯಲ್ಲಿ ಅನೇಕ ಜನೋಪಯೋಗಿ ಕೆಲಸಗಳನ್ನು ಮಾಡಿರುವರು. ಅವುಗಳಲ್ಲಿ ಗ್ರಾಮ ಹಾಗೂ ನಗರಗಳ ನಿರ್ಮಾಣ, ಕೋಟೆ-ಕೊತ್ತಲಗಳನ್ನು ಮತ್ತು ದೇವಾಲಯಗಳನ್ನು ಕಾಲುವೆ ಕೆರೆಗಳನ್ನು ಜಲಾಶಯ ಹಾಗೂ ಸೇತುವೆಗಳ ನಿರ್ಮಾಣ, ನೀರಾವರಿ ಕಾಮಗಾರಿಗಳನ್ನು ನಿರ್ಮಿಸಿದ್ದಾರೆ.

ಇಂದಿಗೂ ಸಹ ಅನೇಕ ಕೆರೆ ಕಾಲುವೆಗಳು ಇರುವುದನ್ನು ಗಮನಿಸಿದರೆ ಅದರ ನಿರ್ಮಾಣ ಕಾರ್ಯದ ಮಹತ್ವ ತಿಳಿಯುತ್ತದೆ. ರಾಜ್ಯದಲ್ಲಿರುವ ಚಿಕ್ಕಪುಟ್ಟ ಪಾಳೆಯಗಾರರನ್ನು ಹಾಗೂ ರಾಜರನ್ನು ಪದಚ್ಯುತಗೊಳಿಸದೇ ಅವರ ಆಡಳಿತವನ್ನು ಮನ್ನಿಸಿದ ವಿಜಯನಗರದ ಅರಸರ ಧೋರಣೆ ಅವರ ಒಟ್ಟು ಸಮಾಜೋ ಸಾಂಸ್ಕೃತಿಕ ವ್ಯಕ್ತಿತ್ವದ ಧ್ಯೋತಕವಾಗಿದೆ. ಅವರು ರೂಪಿಸಿಕೊಂಡಿದ್ದಂತಹ ಸಾಮಾಜಿಕ ಉದಾರ ನೀತಿಗೆ ಇದು ಒಂದು ಉದಾಹರಣೆಯೂ ಆಗಿದೆ. ರಾಜಕೀಯವಾಗಿ ಬಹಳ ಪ್ರಬಲವಾದ ಸಾಮ್ರಾಜ್ಯವಾಗಿದ್ದು 'ದುಷ್ಟ ಶಿಕ್ಷೆ, ಶಿಷ್ಟ ರಕ್ಷೆ' ಎಂಬ ತತ್ತ್ವವು ಈ ಸಾಮಾಜ್ಯದ ಮಂತ್ರವಾಗಿತ್ತು.

ಕೇವಲ ರಾಜಕೀಯವಾಗಿ ಅಷ್ಟೇ ಅಲ್ಲ, ಧಾರ್ಮಿಕವಾಗಿಯೂ ಈ ರಾಜ್ಯ ಪ್ರಬಲವಾಗಿತ್ತು. ಹಲವಾರು ಧರ್ಮಗಳು ರಾಜ್ಯದಲ್ಲಿ ಪ್ರಚಲಿತದಲ್ಲಿದ್ದವು ಎಂಬ ವಿವರಗಳು ರಾಜನು ಸರ್ವಧರ್ಮ ಫರಿಪಾಲಕನಾಗಿದ್ದನು ಎಂಬುದನ್ನು ಶ್ರುತಪಡಿಸುವುದಾಗಿವೆ. ರಾಜ್ಯದಲ್ಲಿ ಬೌದ್ಧ, ಜೈನ, ಶೈವ, ವೈಷ್ಣವ ಹಾಗೂ ಇಸ್ಲಾಂ ಧರ್ಮಗಳ ಅನುಯಾಯಿಗಳು ನೆಲೆಸಿದ್ದರು. ಅವರಲ್ಲಿ ಗಂಭೀರ ಸಂಘರ್ಷ ಉಂಟಾಗದಂತೆ ಪ್ರಚಲಿತದಲ್ಲಿದ್ದು, ಧಾರ್ಮಿಕ ಸಮನ್ವಯತೆಯನ್ನು ಸಾಧಿಸಲಾಗಿತ್ತು. ಈ ವಿಚಾರಗಳು ವಿಜಯನಗರ ಸಾಮ್ರಾಜ್ಯದ ತಾತ್ತ್ವಿಕ ಧೋರಣೆಗಳು ಎಷ್ಟು ಪ್ರಸ್ತುತವಾಗಿದೆ ಎಂಬುದನ್ನು ಧ್ವನಿಸುತ್ತವೆ. ಸಾಮಾಜಿಕವಾಗಿಯೂ ವಿಜಯನಗರ ಸಾಮ್ರಾಜ್ಯವು ಪ್ರಬಲವಾಗಿದ್ದು, ಹಲವಾರು ಭಾಷೆಗಳನ್ನಾಡುವ ಜನರು ಇಲ್ಲಿ ನೆಮ್ಮದಿಯಿಂದ ಜೀವಿಸುತ್ತಿದ್ದರು. ಸಮಾಜದಲ್ಲಿ ಹಲವಾರು ಅನಿಷ್ಟ ಪದ್ಧತಿಗಳಿದ್ದರೂ (ದೇವದಾಸಿ ಹಾಗೂ ಸತಿಪದ್ಧತಿ) ಹಲವು ಹಬ್ಬಗಳು, ಉತ್ಸವಗಳು, ಸಂಪ್ರದಾಯಗಳು ಜಾರಿಯಲ್ಲಿದ್ದವು. ಹಲವು ವರ್ಗ ಹಾಗೂ ಪಂಗಡಗಳಿಗೆ ಸೇರಿದ ಜನರು ಸಮಾಜದಲ್ಲಿದ್ದು ಅವರು ವೈವಿಧ್ಯಮಯವಾದ ರೀತಿಯಲ್ಲಿ ಜೀವನ ನಡೆಸುತ್ತಿದ್ದ ವಿಚಾರಗಳನ್ನು ವಿದೇಶಿ ಯಾತ್ರಿಕರಾದ ಅಬ್ದುಲ್ ರಜಾಕ್, ಬಾರ್ಬೋಸಾ ಹಾಗೂ

ಪಯಾಸ್ ತಂತಮ್ಮ ಕೃತಿಗಳಲ್ಲಿ ವರ್ಣಿಸಿದ್ದಾರೆ. ದಸರಾ, ದೀಪಾವಳಿ, ಹೋಳಿ ಹುಣ್ಣಿಮೆಗಳಂತಹ ಹಬ್ಬಗಳು ಅಂದೂ ಸಹ ಸಾಮಾಜಿಕ ನೆಲೆಯಿಂದ ಆಚರಣೆಯಲ್ಲಿದ್ದುದು ಗಮನಾರ್ಹ ಎಂಬುದನ್ನು ಯಾತ್ರಿಕರು ತಿಳಿಸಿದ್ದಾರೆ.

ನಾಲ್ಕನೆಯ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದಿಂದ ಫಲಿತವಾದ ಸಾಂಸ್ಕೃತಿಕ ವಿವರಗಳನ್ನು ಕೊಡಲಾಗಿದೆ. ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯವು ಸಂಸ್ಕೃತಿ, ಕಲೆಗಳ ಬೀಡಾಗಿದ್ದು ಶಿಲ್ಪಕಲೆ ಮತ್ತು ವಾಸ್ತುಶಿಲ್ಪ ಹಾಗೂ ದೇವಾಲಯಗಳನ್ನು ಕುರಿತು ವಿಸ್ತೃತವಾದ ವಿವರಗಳನ್ನು ನೀಡಲಾಗಿದೆ. ವಿರುಪಾಕ್ಷ ದೇಗುಲ, ಹಂಪಿ ಬಜಾರ್, ಹೇಮಕೂಟದಲ್ಲಿ ಇರುವ ಕಡಲೆ ಮತ್ತು ಸಾಸಿವೆಕಾಳು ಗಣಪತಿಗಳು, ಕೃಷ್ಣದೇಗುಲ, ಬಡವಿಲಿಂಗ, ಉಗ್ರನರಸಿಂಹ ಇವೆಲ್ಲ ಮೊದಲ ಕೇಂದ್ರಗಳಾದರೆ ನೆಲಮಾಳಿಗೆ ಗುಡಿ, ಪುಷ್ಕರಣಿ, ಮಹಾನವಮಿ ದಿಬ್ಬ, ಕಮಲಮಹಲು ಆನೆಲಾಯ, ಹಜಾರರಾಮ ದೇಗುಲ, ಕಾವಲು ಗೋಪುರ, ರಾಣಿಯರ ಸ್ನಾನಗೃಹ ಮತ್ತೊಂದು ಕೇಂದ್ರವೆನಿಸಿವೆ. ಹಾಗೆಯೇ ಅಚ್ಯುತರಾಯ ದೇಗುಲ, ಮಾತಂಗಪರ್ವತ, ಸೂಳೆ ಬಜಾರ್, ಕೋದಂಡರಾಮನ ಗುಡಿ, ಅರಸನ ತುಲಾಭಾರ ಸ್ಥಳ, ವರಾಹ ದೇಗುಲ, ಪುರಂದರ ಮಂಟಪ, ವಿಜಯವಿಠಲ ಮಂದಿರ, ಕಲ್ಲಿನ ತೇರುಗಳ ಪ್ರದೇಶಗಳು ಮಗದೊಂದು ಕೇಂದ್ರವಾಗಿದೆ. ತುಂಗೆಯನ್ನು ದಾಟಿದರೆ ಪರ್ವತ ಪ್ರದೇಶದ ಆನೆಗೊಂದಿಯನ್ನು ವೀಕ್ಷಿಸಬಹುದು. ಇದು ತ್ರೇತಾಯುಗದಲ್ಲಿ ಪುರಾಣ ಪ್ರಸಿದ್ಧ ಕಿಷ್ಕಿಂಧೆ ಎಂಬ ನಂಬಿಕೆ ಇರುವುದು. ಆ ಕಾರಣವಾಗಿ ಅಂದು ಹೆಸರಿಸಿ ಇಂದಿಗೂ ಒಪ್ಪಿಕೊಳ್ಳಲಾಗಿರುವುದು. ಆ ಕಾರಣ ಈಗಲೂ ಇಲ್ಲಿ ಸುಗ್ರೀವನ ಗವಿ, ಆಂಜನೇಯನ ಜನ್ಮಸ್ಥಳವಾದ ಅಂಜನಾದ್ರಿ ಪರ್ವತ ಮತ್ತು ರಾಮ-ಲಕ್ಷ್ಮಣರ ಗುಡಿಗಳನ್ನು ಕಾಣಬಹುದು.

ಬಳ್ಳಾರಿ ಜಿಲ್ಲೆಯ ಹೊಸಪೇಟೆಯಿಂದ ಸುಮಾರು ೧೨ ಕಿ.ಮೀ. ದೂರದಲ್ಲಿರುವ ಹಂಪೆಯ ಪ್ರಮುಖ ಆಕರ್ಷಣೆಯೆಂದರೆ ವಿಜಯನಗರ ಅರಸರ ಕುಲದೈವವಾಗಿದ್ದ ವಿರೂಪಾಕ್ಷೇಶ್ವರ ದೇವಾಲಯ. ಹಂಪೆಯ ಬಲ ತುದಿಯಲ್ಲಿ ತುಂಗಭದ್ರಾ ನದಿಯ ದಂಡೆಯ ಮೇಲಿರುವ ಇದರ ವಿಸ್ತೀರ್ಣ ೧೫೦x೧೨೦ ಅಡಿಗಳು. ಹನ್ನೊಂದು ಅಂತಸ್ತುಗಳಿಂದ ೧೬೦ ಅಡಿಗಳಷ್ಟು ಎತ್ತರವಿರುವ ಇದರ ಪ್ರಧಾನ ಗೋಪುರ ಅನತಿ ದೂರದಿಂದಲೇ ಗಗನ ಚುಂಬಿಯಂತೆ ಧೀರ ಗಂಭೀರ ಭಾವದಿಂದ ಪ್ರವಾಸಿಗಳ ಮನಸೆಳೆದು ರೋಮಾಂಚನಗೊಳಿಸುವಷ್ಟು ಆಕರ್ಷಣೀಯವಾಗಿದೆ. ತನ್ನ ತಪಸ್ಸಿಗೆ ಭಂಗ ಉಂಟುಮಾಡಿದ ಮನ್ಮಥನನ್ನು ಸುಟ್ಟು ಇಲ್ಲಿನ ಪಂಪಾಂಬಿಕೆಯನ್ನು ವರಿಸಿದ ಹಿನ್ನೆಲೆಯಲ್ಲಿ ಈ ವಿರೂಪಾಕ್ಷನಿಗೆ ಪಂಪಾಪತಿ ಎಂಬುದಾಗಿಯೂ ಕರೆಯಲಾಗಿದೆ.

ವಿರೂಪಾಕ್ಷ ದೇಗುಲದಿಂದ ದಕ್ಷಿಣಕ್ಕೆ ಸಾಗಿದರೆ ಹೇಮಕೂಟ ಪರ್ವತ ಸಿಗುತ್ತದೆ. ಅಲ್ಲಿಯೂ ಅನೇಕ ದೇಗುಲಗಳಿವೆ. ಹೇಮಕೂಟದಿಂದ ಕಮಲಾಪುರದ ಮಾರ್ಗದಲ್ಲಿ ಸ್ವಲ್ಪ ಮುಂದೆ ಸಾಗಿ ಬಲಕ್ಕೆ

ಕಾಲುದಾರಿಯಲ್ಲಿ ನೂರು ಮೀಟರ್‌ನಷ್ಟು ಹೋದರೆ ಮೂರು ಅಡಿ ನೀರಿನಿಂದ ಆವೃತವಾಗಿರುವ ಬಡವಿಲಿಂಗವೆಂಬ ಹನ್ನೆರಡು ಅಡಿ ಎತ್ತರದ ಏಕಶಿಲಾ ಲಿಂಗದ ದರುಶನವಾಗುತ್ತದೆ. ಈ ಮಂದಿರದ ಸಮೀಪದಲ್ಲೆ ಏಕಕಾಲದಲ್ಲೆ ಭಯಭಕ್ತಿಯನ್ನು ಮೂಡಿಸುವ 'ಉಗ್ರ ನರಸಿಂಹ' (ಲಕ್ಷ್ಮೀ ನರಸಿಂಹ?)ನ ವಿಗ್ರಹವಿದೆ. ಇದು ಹಂಪಿಯ ಎಲ್ಲಾ ವಿಗ್ರಹಗಳಿಗಿಂತಲೂ ದೊಡ್ಡದೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಆದರೆ ಮತಾಂಧರ ಮತಿಹೀನ ಆಕ್ರಮಣದ ಪ್ರಭಾವದಿಂದ ಈ ಮೂರ್ತಿ ಅಲ್ಲಲ್ಲಿ ವಿರೂಪಗೊಂಡಿದೆ. ಬಹುಶಃ ಈ ನರಸಿಂಹನಿಂದಲೇ ವಿಜಯನಗರಕ್ಕೆ 'ನರಸಿಂಗನ ರಾಜ್ಯ'ವೆಂದು ಹೆಸರು ಬಂದಿರಬೇಕು ಅಥವಾ ಕೃಷ್ಣಾವತಾರ ಹಾಗೂ ನರಸಿಂಹಾವತಾರಗಳು ವಿಷ್ಣುವಿನ ಅವತಾರವಾದುದರಿಂದ ಕೃಷ್ಣದೇವರಾಯನ ರಾಜ್ಯವನ್ನು 'ನರಸಿಂಗ'ನ ರಾಜ್ಯವೆಂದು ಕರೆಯಲಾಯಿತು. ಕ್ರಿ.ಶ. ೧೫೨೮ರಲ್ಲಿ ಬ್ರಾಹ್ಮಣ ಶಿಲ್ಪಿಯೊಬ್ಬ ಈ ಮೂರ್ತಿಯನ್ನು ಕೆತ್ತಿದನಂತೆ. ಚತುರ್ಭುಜಗಳೊಡನೆ ಕಾಲುಗಳನ್ನು ಮಡಿಚಿ ಕುಳಿತುಕೊಂಡಿರುವ ಈ ಬೃಹತ್ ವಿಗ್ರಹಕ್ಕೆ ಮಂದಿರವಾಗಲಿ ಅಥವಾ ಮಂಟಪವಾಗಲಿ ಇಲ್ಲ. ಹಿಂದೆ ಏಳು ಹೆಡೆಯ ಸರ್ಪವಿದೆ. ವಿರೂಪಗೊಂಡಿರುವ ಈ ಮೂರ್ತಿಯನ್ನು ಜೀರ್ಣೋದ್ಧಾರಗೊಳಿಸಿ ಮೂಲರೂಪವನ್ನು ಕೊಡುವ ಪ್ರಯತ್ನ ಮಾಡಲಾಗಿದೆ.

ಈ ವಿಗ್ರಹದ ದಕ್ಷಿಣ ಭಾಗದಲ್ಲಿ ಸುಮಾರು ೨೫೦೦ ಎಕರೆ ಕೃಷಿ ಭೂಮಿಗೆ ನೀರುಣಿಸುವ ಸಾಮರ್ಥ್ಯವುಳ್ಳ ೧೫ ಕಿ.ಮೀ. ಉದ್ದದ ವಿಜಯನಗರ ಕಾಲದ ತುರ್ತು ಕಾಲುವೆ ಇದೆ. ಕೃಷ್ಣದೇವರಾಯನ ಕಾಲದಲ್ಲಿ ಇಂತಹ ೧೬ ಕಾಲುವೆಗಳಿದ್ದುವೆಂದು ತಿಳಿದು ಬರುವುದು. ಅದೇ ದಾರಿಯಲ್ಲಿ ೧೨ ಅಡಿ ಎತ್ತರದ ಉದ್ದಾನ ವೀರಭದ್ರ ದೇವಾಲಯ ಮತ್ತು ಚಂಡಿಕೇಶ್ವರ ದೇವಾಲಯ ಹಾಗೂ ಕೋಟೆಗೋಡೆಗಳನ್ನು ಕಾಣಬಹುದು. ಹಾಗೆಯೇ ಮುಂದುವರಿದರೆ ಚೌಕಾಕಾರದ ಭಾರೀ ಕೋಟೆಯೊಂದು ಸಿಗುತ್ತದೆ. ಇದನ್ನು ಡಣ್ಣಾಯಕನ ಕೋಟೆ ಅಥವಾ ದಂಡನಾಯಕನ ಕೋಟೆ ಎನ್ನಲಾಗಿದೆ. ಪಕ್ಕದಲ್ಲೆ ಮತ್ತೊಂದು ಅವಶೇಷವಿದ್ದು ಅದು ಟಂಕಶಾಲೆಯಾಗಿದೆ. ಈ ಅವಶೇಷಕ್ಕೆ ಹೊಂದಿಕೊಂಡಂತೆಯೇ ಅರಸು ಮನೆತನದವರ ಖಾಸಗಿ ಪೂಜಾಗೃಹವಾದ ಹಜಾರರಾಮನ ದೇಗುಲವಿದೆ. ಕೃಷ್ಣದೇವರಾಯನು ಕ್ರಿ.ಶ. ೧೫೧೩ರಲ್ಲಿ ದಿಗ್ವಿಜಯ ಸ್ಥಾಪಿಸಿದ ಸ್ಮರಣಾರ್ಥವಾಗಿ ಈ ದೇವಾಲಯವನ್ನು ನಿರ್ಮಿಸಿದನಂತೆ. ಈ ದೇವಾಲಯದ ಗೋಡೆಗಳಲ್ಲಿ ಹಿಂದೂ ದೇವತೆಗಳ ಅದರಲ್ಲೂ ವಿಶೇಷವಾಗಿ ವೈಷ್ಣವ ಧರ್ಮಕ್ಕೆ ಸೇರಿದ ವಿಗ್ರಹಗಳಿದ್ದು ಚಿತ್ರಪಟ್ಟಿಕೆ ಸಾಲುಗಳಿಂದ ಅಲಂಕೃತಗೊಳಿಸಲಾಗಿದೆ. ಅಶ್ವ ಮತ್ತು ಆನೆಗಳ ಮೆರವಣಿಗೆಗೆ ಭರ್ಚಿ ಹಿಡಿದ ವೀರ ಸೈನಿಕರು ಹಾಗೂ ನೃತ್ಯ ಕನ್ನಿಕೆಯರ ಶಿಲ್ಪಗಳಂತೂ ಅತ್ಯಂತ ಭಾವಪೂರ್ಣವಾಗಿವೆ.

ಇಪ್ಪತ್ತೆರಡು ಅಡಿ ಎತ್ತರವಿರುವ ಮಹಾನವಮಿ ದಿಬ್ಬವಂತೂ ೮೦x೮೦ ವಿಸ್ತೀರ್ಣದ ಶಿಲಾವೇದಿಕೆಯೂ ಆಗಿದೆ. ಕೃಷ್ಣದೇವರಾಯನು ಓರಿಸ್ಸಾ ರಾಜ್ಯವನ್ನು ಗೆದ್ದ ಸವಿನೆನಪಿಗಾಗಿ ಇದನ್ನು

ನಿರ್ಮಿಸಿದನೆಂದು ಹೇಳಲಾಗಿದೆ. ಈ ವೇದಿಕೆಯ ಹೊರಮೈ ತುಂಬ ಅನೇಕ ಉಬ್ಬು ಶಿಲ್ಪಗಳು, ಮೋಹಕವಾದ ನೃತ್ಯ ಭಂಗಿಗಗಳು, ಆನೆಗಳ ಮೆರವಣಿಗೆ, ಕುದುರೆಗಳ ಸಾಲು, ಸೈನಿಕ ಸಾಲುಗಳ ಚಿತ್ರಗಳನ್ನು ಇಲ್ಲಿ ಕಾಣಬಹುದಾಗಿದೆ. ಇದರ ಪಕ್ಕದಲ್ಲೆ ನೆಲಮಾಳಿಗೆಯ ರಹಸ್ಯ ಮಂದಿರವಿದೆ. ಮಹಾನವಮಿ ದಿಬ್ಬದ ಬಳಿಯಲ್ಲೆ ಇತ್ತೀಚಿಗಷ್ಟೇ ಶೋಧಿಸಿದ ಚೌಕಾಕಾರದ ಗ್ರಾನೈಟ್ ಶಿಲೆಯ ಪುಷ್ಕರಣಿ ಇದೆ. ಇದು ಅಪೂರ್ವ ಕಲಾಕೃತಿಯಂತೆ ವಿಶಿಷ್ಟ ರಮ್ಯವಾಗಿದೆ. ಸುಮಾರು ೫೦x೫೦ ಅಡಿ ಆಳದ ಈ ಕಲ್ಯಾಣಿಗೆ ಮೇಲಿನಿಂದ ತಳಭಾಗದವರೆಗೂ ಹಂತ ಹಂತವಾಗಿ ನಾಲ್ಕು ದಿಕ್ಕುಗಳಿಗೂ ಮೆಟ್ಟಿಲುಗಳಿದ್ದು ಇದು ಸಂದರ್ಶಕರನ್ನು ಸೂಜಿಗಲ್ಲಿನಂತೆ ಸೆಳೆಯುತ್ತದೆ. ವಿಶಿಷ್ಟ ಶೈಲಿಯಿಂದ ನಿರ್ಮಿತವಾದ ಕಮಲಮಹಲ್, ಗಜಶಾಲೆ ಹಾಗೂ ರಾಣಿಯರ ಸ್ನಾನಗೃಹಗಳು ಇಸ್ಲಾಂ ಶೈಲಿಯ ಪ್ರತೀಕಗಳಾಗಿವೆ.

ಸಮೀಪದ ಕಮಲಾಪುರ ವಸ್ತುಸಂಗ್ರಹಾಲಯದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಅಳಿದುಳಿದ ಶಿಲ್ಪಗಳನ್ನು, ರಾಜರಾಣಿಯರು ಉಪಯೋಗಿಸುತ್ತಿದ್ದ ವಸ್ತುಗಳನ್ನು ಸಂಗ್ರಹಿಸಿ ಇಡಲಾಗಿದೆ. ಕಮಲಾಪುರದಿಂದ ೫ ಕಿ.ಮೀ. ದೂರದಲ್ಲಿ ಇಂದು ಕನ್ನಡ ವಿಶ್ವವಿದ್ಯಾಲಯವು ಇದೆ. ಈ ವಿಶ್ವವಿದ್ಯಾಲಯವು ಸಂಶೋಧನಾ ಕ್ಷೇತ್ರಕ್ಕೆ ಸಾಂಸ್ಕೃತಿಕವಾಗಿ ವಿಶಿಷ್ಟ ಕೊಡುಗೆಯನ್ನು ನೀಡುತ್ತಿರುವುದಾಗಿರುವುದರಿಂದ ವಿಜಯನಗರ ಕಾಲಕ್ಕೆ ಸಂಬಂಧಿಸಿದ ಹತ್ತು ಹಲವು ಮಾದರಿಗಳನ್ನು ಈ ವಿಶ್ವವಿದ್ಯಾಲಯದ ಅಕ್ಷರ ಗ್ರಂಥಾಲಯದ ವಸ್ತುಸಂಗ್ರಹಾಲಯದಲ್ಲಿ ಸಂರಕ್ಷಿಸಿ ಇಡಲಾಗಿದೆ.

ಹಂಪೆಯಲ್ಲಿ ಲಭ್ಯವಾಗಿರುವ ಎಲ್ಲಾ ಪ್ರಮುಖ ಸ್ಮಾರಕಗಳನ್ನು ಸುಂದರ ಪರಿಸರದಲ್ಲಿ ಅಚ್ಚುಕಟ್ಟಾಗಿ ಸಂರಕ್ಷಿಸಲ್ಪಟ್ಟಿರುವುದು ಸಾಂಸ್ಕೃತಿಕ ಅಧ್ಯಯನಕ್ಕೆ ಹೆಚ್ಚು ಗ್ರಾಸವನ್ನು ಒದಗಿಸಿದಂತಾಗಿದೆ. ಪ್ರತಿ ವರ್ಷ ನವೆಂಬರ್ ತಿಂಗಳಿನಲ್ಲಿ ಹಂಪಿ ಉತ್ಸವವನ್ನು ಆಚರಿಸಲಾಗುತ್ತಿದ್ದು, ವಿಶ್ವದ ಹಲವಾರು ಜನರು ಈ ಉತ್ಸವದಲ್ಲಿ ಪಾಲ್ಗೊಳ್ಳುತ್ತಾರೆ. ವಿಜಯನಗರ ಸಾಮ್ರಾಜ್ಯವನ್ನು ಪ್ರತ್ಯಕ್ಷವಾಗಿಯೇ ಕಣ್ಣೆದುರಿಗೆ ತರುವ 'ಧ್ವನಿ ಬೆಳಕು' ಕಾರ್ಯಕ್ರಮವನ್ನು ಉತ್ಸವದಲ್ಲಿ ಆಯೋಜಿಸಲಾಗಿದ್ದು ದೇಶದ ಹಲವಾರು ಕಲಾವಿದರು ಇದರಲ್ಲಿ ಪಾಲ್ಗೊಳ್ಳುತ್ತಾರೆ. ಈ ಧ್ವನಿ ಬೆಳಕು ಕಾರ್ಯಕ್ರಮದ ಮೂಲಕ ಸಾಂಸ್ಕೃತಿಕ ಗತ ವೈಭವವನ್ನು ಸಮಕಾಲೀನರಿಗೆ ಮನದಟ್ಟು ಮಾಡುತ್ತಿರುವುದು ಒಂದು ವಿಶೇಷ ಆಕರ್ಷಣೆಯಾಗಿದೆ. ಧ್ವನಿ ಬೆಳಕು ಕಾರ್ಯಕ್ರಮವನ್ನು ವೀಕ್ಷಿಸಲು ಪ್ರತಿದಿನ ಲಕ್ಷಾಂತರ ಜನರು ಆಗಮಿಸುತ್ತಾರೆ. ಇದರಿಂದಾಗಿಯೇ ವಿಜಯನಗರ ಸಾಮ್ರಾಜ್ಯವು ಇಂದು ವಿಶ್ವಪರಂಪರೆಯ ಅದ್ಭುತ ಸ್ಮಾರಕಗಳ ಸಾಲಿನಲ್ಲಿ ಗುರುತಿಸಲ್ಪಟ್ಟು ವಿಶ್ವದಾದ್ಯಂತ ಪ್ರವಾಸಿಗರನ್ನು ಆಕರ್ಷಿಸುತ್ತಲೇ ತನ್ನ ಗತವೈಭವವನ್ನು ಸಾರುತ್ತಿದೆ.

ಒಟ್ಟಾರೆ ಅಧ್ಯಯನಕ್ಕೆ ಕೊನೆಯೇ ಇಲ್ಲವೆಂಬಂತೆ ವಿಜಯನಗರ ಸಾಮ್ರಾಜ್ಯದ ಸಂಸ್ಕೃತಿಯು ವಿಸ್ತಾರವಾಗಿದೆ. ದಕ್ಷಿಣ ಭಾರತದ ಈ ಮಹಾಸಾಮ್ರಾಜ್ಯವು ಅಂದು ಸಕಲ ಭಾಷೆ, ಕಲೆ, ಶಿಕ್ಷಣ ಮತ್ತು

ಸಾಹಿತ್ಯಗಳ ಅಭಿವೃದ್ಧಿಗೆ ಅವಕಾಶ ಹಾಗೂ ಪ್ರೋತ್ಸಾಹವನ್ನು ನೀಡಿತು. ಈ ಮೂಲಕ ದಕ್ಷಿಣ ಭಾರತದ ಸಂಸ್ಕೃತಿಯು ಸಮನ್ವಯವನ್ನು ಸಾಧಿಸಿತು. ವಿಜಯನಗರದ ಸಾಮ್ರಾಟರು ಪಾಲಿಸಿದ ಪರಧರ್ಮ ಸಹಿಷ್ಣುತೆಯ ನೀತಿಯು ಸರ್ವಕಾಲಕ್ಕೂ ಅನುಕರಣೀಯವಾಗಿದೆ. ಇಂಥ ಮಾದರಿ ಮಹಾಸಾಮ್ರಾಜ್ಯದ ಸಾಂಸ್ಕೃತಿಕ ನೆಲೆಗಳನ್ನು ಈ ಮೂಲಕ ಗುರುತಿಸಿದ್ದೇನೆ. ಈ ನೆಲೆಗಳನ್ನು ಅಧ್ಯಯನ ಮಾಡಲು ತೊಡಗಿದವರು ಒಂದೆಡೆ ಪೂರ್ವಾತ್ ಪೂರ್ವ ಪರಂಪರಾಗತ ಇತಿಹಾಸ ದರ್ಶನವನ್ನು ಪಡೆದರೆ, ಮತ್ತೊಂದೆಡೆ ಸಮಕಾಲೀನವಾಗಿ ಈ ಇತಿಹಾಸ ಸ್ವರೂಪ ಹೇಗೆ ಮತ್ತು ಏಕೆ ಪ್ರಸ್ತುತ ಎಂಬುದನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಪ್ರೇರೇಪಿಸುತ್ತದೆ. ಒಂದು ಸಾಮ್ರಾಜ್ಯದ ಇತಿಹಾಸ ಸಾಂಸ್ಕೃತಿಕ ಆಯಾಮವನ್ನು ಹೊಂದಿದಲ್ಲಿ ಅದರ ಪೂರ್ವಾಪರಗಳೆಲ್ಲ ಗಂಭೀರವಾದುವಾಗಿರುತ್ತವೆ. ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ಹೊಯ್ಸಳರಂಥ ಸಾಮ್ರಾಟರು ಕರ್ನಾಟಕ ಸಂಸ್ಕೃತಿಗೆ ಕೊಟ್ಟಿರುವ ಕೊಡುಗೆಗಳು ಎಷ್ಟು ಮುಖ್ಯವಾದವೋ ಅಷ್ಟೇ ಮುಖ್ಯವಾದುದಾಗಿದೆ ವಿಜಯನಗರದ ಸಾಂಸ್ಕೃತಿಕ ಕೊಡುಗೆ. ಮಧ್ಯಯುಗದಂಥ ಅನೇಕ ಸಂಕೀರ್ಣತೆಗಳ ಸಂದರ್ಭದಲ್ಲಿ ವಿಜಯನಗರ ಸಾಮ್ರಾಜ್ಯದ ಅರಸರು ಹಾಕಿಕೊಟ್ಟ 'ಸಾಂಸ್ಕೃತಿಕ ಮಾರ್ಗ' ಇಂದಿಗೂ ಅನುಕರಣೀಯವಾಗಿದೆ. ಇನ್ನು ಅಂದಿನಿಂದ ಇಂದಿನವರೆವಿಗೂ ಇಂದು ಕೇವಲ ಇತಿಹಾಸವಾದರೆ 'ಸಾಂಸ್ಕೃತಿಕ ಇತಿಹಾಸ'ವಾಗಿರುವುದೂ ಆ ಹೊತ್ತಿನ ಮಹತ್ವವನ್ನು ಹೇಳುವುದಾಗಿದೆ. ಹಾಗಾಗಿಯೇ ವಿಜಯನಗರ ಸಾಮ್ರಾಜ್ಯವನ್ನು ಕನ್ನಡ ಸಾಮ್ರಾಜ್ಯವೆಂದಷ್ಟೇ ಹೇಳದೇ ಮಧ್ಯಕಾಲೀನ ದಕ್ಷಿಣ ಭಾರತ ವಿರಾಟ್ ಸಾಮ್ರಾಜ್ಯವೆಂದೂ ಹೇಳುವುದುಂಟು. ಒರಿಸ್ಸಾ, ತಮಿಳುನಾಡು, ಆಂಧ್ರಪ್ರದೇಶ, ಕೇರಳ ರಾಜ್ಯಗಳ ಪ್ರದೇಶಗಳನ್ನೆಲ್ಲ ಗೆದ್ದು ಬೃಹತ್ ಸಾಮ್ರಾಜ್ಯ ಕಟ್ಟಿದ ಇಲ್ಲಿನ ಅರಸರ ಕೊಡುಗೆಯು ಹೇಗೆ ಅವಿಸ್ಮರಣೀಯವಾದುದು ಎಂಬುದನ್ನು ಗುರುತಿಸುವುದೇ ನನ್ನ ಅಧ್ಯಯನದ ಮುಖ್ಯ ಚೌಕಟ್ಟಾಗಿದೆ.

* * * *

# ಅನುಬಂಧ

## ಗ್ರಂಥಋಣ

೧. ರಾಬರ್ಟ್ ಸಿವೆಲ್ : *ಮರೆತುಹೋದ ಮಹಾಸಾಮ್ರಾಜ್ಯ, ವಿಜಯನಗರ* (ಅನು.) ಸದಾನಂದ ಕನವಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೨.

೨. ಸೂರ್ಯನಾರಾಯಣ ಬಿ., : *ಮರೆಯಲಾಗದ ಮಹಾಸಾಮ್ರಾಜ್ಯ* (ಅನು.) ಬಾಲಸುಬ್ರಹ್ಮಣ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೦.

೩. ಹರಿನಾರಾಯಣ ಆಪಟೆ : *ಕನ್ನಡಿಗರ ಕರ್ಮಕತೆ,* (ಅನು.) ಗಳಗನಾಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೯.

### ಸಹಾಯಕ ಗ್ರಂಥಗಳು

೧. ಕೃಷ್ಣಮೂರ್ತಿ ಎಸ್.ಎಚ್. (ಸಂ.) : *ಅವಲೋಕನ ಪರಂಪರೆಯ ಸಮೀಕ್ಷೆ,* ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು - ೧೯೮೫.

೨. ಕೊಟ್ರಯ್ಯ ಸಿ.ಟಿ.ಯಂ. : *ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೧.

೩. ಗಿಲ್ಬರ್ಟ್ ಸಿಕ್ವೇರಾ : *ಕರ್ನಾಟಕ ಇತಿಹಾಸ,* ಚೇತನ ಬುಕ್‌ಹೌಸ್, ಮೈಸೂರು - ೨೦೦೫.

೪. ಚಿನ್ನಸ್ವಾಮಿ ಸೋಸಲೆ : *ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ,* ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು - ೨೦೦೧.

೫. ಜಗತಾಪ.ಮು.ಮಾ. : *ತಾರೀಖೆ ಇಸ್ಕಂದರಿ* (ಅನು.) ವಿಠಲರಾವ್ ಗಾಯಕ್ವಾಡ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೦.

೬. ಜೋಶಿ ಡಿ.ಟಿ. : *ಭಾರತದ ಇತಿಹಾಸ,* ವಿದ್ಯಾನಿಧಿ ಪ್ರಕಾಶನ, ಗದಗ - ೨೦೦೬.

೭. ದೇವರಕೊಂಡಾರೆಡ್ಡಿ (ಸಂ.) : *ಹಂಪಿ ಸಂಪುಟ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೬.

೮. ದೇವರಾಜ ಡಿ.ವಿ. : *ವಿಜಯನಗರ ಅಧ್ಯಯನ* (ಸಂ.೧) ಹಂಪಿ ಉತ್ಸವ - ೧೯೯೫-೧೯೯೬.

೯. ನಾಗೇಗೌಡ ಎಚ್.ಎಲ್., : *ಪ್ರವಾಸಿ ಕಂಡ ಇಂಡಿಯಾ*, ಮೈಸೂರು ವಿಶ್ವವಿದ್ಯಾಲಯ - ೧೯೬೬.

೧೦. ಪಾಲಾಕ್ಷ : *ಸಮಗ್ರ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ*, ಶಶಿ ಪ್ರಕಾಶನ, ತಿಪಟೂರು - ೨೦೦೦.

೧೧. ಪುರುಷೋತ್ತಮ ಬಿಳಿಮಲೆ, ಚಲುವರಾಜು (ಸಂ.) : *ಹಂಪಿ ಜಾನಪದ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೬.

೧೨. ಪುಲುಮತಿ ಶ್ಯಾಮರಾವ್ : *ವಿಜಯನಗರದ ಕಲೆ ಮತ್ತು ಸಾಹಿತ್ಯ*, ಮೈಸೂರು ಸಂಸ್ಥಾನ ಸಂಸ್ಕೃತಿ ಅಧ್ಯಯನ ಇಲಾಖೆ, ಬೆಂಗಳೂರು - ೧೯೭೦.

೧೩. ಪ್ರಕಾಶ ಎಂ.ಪಿ., : *ಡೊಮಿಂಗೋಸ್ ಪಿಯಾಸ್ ಕಂಡ ವಿಜಯನಗರ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೦.

೧೪. ಬಸವರಾಜ ಮಲಶೆಟ್ಟಿ : *ಹಂಪೆ ಒಂದು ಪರಿಚಯ*, ಮಹಾಕವಿ ಹರಿಹರ ಸಂಶೋಧನ ಕೇಂದ್ರ, ಹಂಪೆ - ೧೯೮೧.

೧೫. ಮಹದೇವ ಸಿ., ಚಿನ್ನಸ್ವಾಮಿ ಸೋಸಲೆ (ಸಂ.) : *ಹಂಪಿ ಅಂದು-ಇಂದು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೬.

೧೬. ರಂಗಸ್ವಾಮಯ್ಯ ಜಿ.ಆರ್., : *ಕರ್ನಾಟಕದ ಸಂಕ್ಷಿಪ್ತ ಚರಿತ್ರೆ*, ಚೇತನ ಬುಕ್ ಹೌಸ್, ದಾವರಣಗೆರೆ - ೨೦೦೧.

೧೭. ರಾಮಸ್ವಾಮಿ ಬಿ., ಭಾರ್ಗವಿ ಶಿವಯ್ಯ : *ಕೃಷ್ಣದೇವರಾಯನ ಜೀವನ ಮತ್ತು ಸಾಧನೆಗಳು*, ಪ್ರಾಚ್ಯ ವಸ್ತು ಸಂಗ್ರಹಾಲಯ, ಮೈಸೂರು - ೧೯೯೭.

೧೮. ಲಕ್ಷ್ಮಣ್ ತೆಲಗಾವಿ (ಸಂ.) : *ಜೀರ್ಣ ವಿಜಯನಗರಾದರ್ಶಂ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೬.

೧೯. ವಸುಂಧರಾ ಫಿಲಿಯೋಜಾ : *ಅಳಿದುಳಿದ ಹಂಪೆ*, ಪ್ರೇಮಮಯಿ ಪ್ರಕಾಶನ, ಹಂಪೆ - ೧೯೮೨.

೨೦. ವಿವೇಕ ರೈ (ಸಂ.) : *ಪ್ರವಾಸಿ ಕಂಡ ವಿಜಯನಗರ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೫.

೨೧. ಶಿವಣ್ಣ ಆರ್.ಜಿ., : *ಭಾರತದ ಇತಿಹಾಸ ಮತ್ತು ಸಂಸ್ಕೃತಿ*, ಪುಷ್ಪಗಿರಿ ಪ್ರಕಾಶನ, ಮೈಸೂರು - ೧೯೯೬.

೨೨. ಶಿವಣ್ಣ ಆರ್.ಜಿ. (ಸಂ.) : *ಕರ್ನಾಟಕ ಚರಿತ್ರೆ* (ಸಂ.೨), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೭.

೨೩. ಶ್ರೀನಿವಾಸಾಚಾರ್ : *ಹಂಪಿ ವಿಜಯನಗರ ಸಾಮ್ರಾಜ್ಯದ ಪ್ರಖ್ಯಾತ ರಾಜಧಾನಿ*, ಪುರಾತತ್ವ ಸಂಗ್ರಹಾಲಯ, ಮೈಸೂರು - ೧೯೯೫.

೨೪. ಸ್ಟೀವನ್ ಕ್ಯಾಡ್ರಸ್ ಮತ್ತು ಸಂತೋಷ ಸಲ್ಡಾನ್ : *ಮಧ್ಯಕಾಲೀನ ಭಾರತದ ಇತಿಹಾಸ*, ಲಕ್ಷ್ಮಿ ಪ್ರಿಂಟಿಂಗ್, ಪಬ್ಲಿಸಿಂಗ್ ಹೌಸ್, ಮೈಸೂರು - ೨೦೦೪.

**ಅಪ್ರಕಟಿತ ಎಂ.ಫಿಲ್. ಸಂಪ್ರಬಂಧಗಳು**

೧. ಬಸವರಾಜಯ್ಯ ಮಠದ : *ವಿಜಯನಗರ ಕಾಲದ ಸಮಾಜ : ಕೆಲವು ಅನಿಷ್ಟ ಪದ್ಧತಿಗಳು*, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೧೯೯೬.

೨. ರವೀಂದ್ರಕುಮಾರ ಜೆ., : *ಹಂಪಿ ಮೌಖಿಕ ಚರಿತ್ರೆ*, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೩.

೩. ಸುಮನ ಆರ್., : *ವಿಜಯನಗರ ತುಳುವ ಅರಸರ ರಾಣಿಯರು*, ಕನ್ನಡ ವಿಶ್ವವಿದ್ಯಾಲಯ, ಹಂಪಿ - ೨೦೦೬.

೪. ಸೋಮಶೇಖರ ಎಸ್.ವೈ., : *ಹಂಪಿ ಬಜಾರುಗಳು*, ಕನ್ನಡ ವಿಶ್ವವಿದ್ಯಾಲಯ, ಹಂಪಿ.

* * * *

